# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೭ || ಬೆಂಗಳೂರು, ಗುರುವಾರ, ಡಿಸೆಂಬರ್ ೬, ೨೦೧೨ (ಮಾರ್ಗಶಿರ ೧೫, ಶಕ ವರ್ಷ ೧೯೩೪) || ಸಂಚಿಕೆ ೪೮

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಕಛೇರಿ ಕೆ.ಹೆಚ್.ಬಿ ಕಾಂಪ್ಲೆಕ್ಸ್, 6ನೇ ಮಹಡಿ ಕಾವೇರಿ ಭವನ ಕೆಂಪೇಗೌಡ ರಸ್ತೆ ಬೆಂಗಳೂರು–560009**

**ಸಂ:ಡಿಪಿಎನ್:ಸಿಶಾ–2:196:2011–12**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಶೀಘ್ರಲಿಪಿಗಾರರ ಬ್ಯಾಕ್‌ಲಾಗ್ ಹುದ್ದೆಗೆ ಆಯ್ಕೆಯಾದ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿ:– ಪರಿಶಿಷ್ಟ ಪಂಗಡ.

| ಕ್ರ. ಸಂ. | ನೋಂದಣಿ ಸಂಖ್ಯೆ | ಅಭ್ಯರ್ಥಿಯ ಹೆಸರು | ವರ್ಗೀಕರಣ | ಜನ್ಮ ದಿನಾಂಕ | ಶೇಕಡಾವಾರು ಅಂಕಗಳು |
|---|---|---|---|---|---|
| 01 | 02 | 03 | 04 | 05 | 06 |
| 1. | 1 | ಆನಂದ ಯಮನಪ್ಪ ತಳವಾರ | ಪರಿಶಿಷ್ಟ ಪಂಗಡ (ಗ್ರಾಮೀಣ ಅಭ್ಯರ್ಥಿ) | 2.6.1982 | 58.05% |

**ಹೆಚ್.ಆರ್.ರೇಣುಕ**
ಆಯ್ಕೆ ಪ್ರಾಧಿಕಾರ ಹಾಗೂ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು, ಬೆಂಗಳೂರು.

**PR - 178**

**FORM-IV**

**(SEE RULE-12)**

**NOTICE**

It is hereby notified that the undersigned has changed his/her name from **SHARANAPPA S/O HULLAPPA, HARIJAN** to **SHARANAPPA S/O HULLAPPA. NAGENDRAGAD**

**P.D.c/n 129**

**SHARANAPPA S/O HULLAPPA, HARIJAN**

**ನಮೂನೆ–1**

**(ನಿಯಮ–9)**

**ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು**

**ಅಧಿಸೂಚನೆ**

**ಶ್ರೀಮತಿ ಸೌಮ್ಯ ಪಿ.ಪಿ,** ಉಪನ್ಯಾಸಕರು ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬೆಂಗಳೂರು ನಗರ ಜಿಲ್ಲೆ ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು **ಶ್ರೀಮತಿ ಎ. ಸೌಮ್ಯ ಪೊನ್ನಪ್ಪ** ಎಂದು ಬದಲಾವಣೆ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

**ಅಪರ ಆಯುಕ್ತರು (ಆಡಳಿತ)**

**P.D.c/n 130** ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು,

**ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–01.**

**ಸಂಖ್ಯೆ: ಇ(3) 1856 /2012–13/ಪಿಎಸ್‌ಸಿ ದಿನಾಂಕ: 22–11–2012.**

**ಅಧಿಸೂಚನೆ**

**ಉಲ್ಲೇಖ: ಆಯೋಗದ ಅಧಿಸೂಚನೆ ಸಂಖ್ಯೆ: ಇ(3)1727/2012–13/ಪಿಎಸ್‌ಸಿ, ದಿನಾಂಕ: 20–07–2012.**

1. ಆಯೋಗವು ಉಲ್ಲೇಖಿತ ಅಧಿಸೂಚನೆಯಲ್ಲಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಗ್ರಾಮ ಪಂಚಾಯಿತಿಗಳಲ್ಲಿನ 1750 ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳನ್ನು, ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಆಯ್ಕೆ ಮೂಲಕ ನೇರ ನೇಮಕಾತಿ) (ಸಾಮಾನ್ಯ) ನಿಯಮಗಳು 2006 ಹಾಗೂ ಅದರ ತಿದ್ದುಪಡಿಗಳನ್ವಯ ಭರ್ತಿಮಾಡಲು ON-LINE ಮೂಲಕ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಪಿಟೀಷನ್ ನಂ. 17942/2010ರ ಮೇಲೆ ದಿನಾಂಕ: 02–08–2012ರಂದು ನೀಡಲಾದ ತಡೆಯಾಜ್ಞೆಯ ಮೇರೆಗೆ ಅರ್ಜಿ ಸ್ವೀಕೃತಿಯನ್ನು ಸ್ಥಗಿತಗೊಳಿಸಲಾಗಿತ್ತು. ಪ್ರಸ್ತುತ ನ್ಯಾಯಾಲಯವು ತಡೆಯಾಜ್ಞೆಯನ್ನು ತೆರವುಗೊಳಿಸಿರುವ ಮೇರೆಗೆ ಈ ಅಧಿಸೂಚನೆಯ ಮೂಲಕ ಅರ್ಜಿ ಸ್ವೀಕೃತಿಯನ್ನು ಮುಂದುವರಿಸಿದೆ.

**ವಿಶೇಷ ಸೂಚನೆ:– 1) ದಿನಾಂಕ: 20–07–2012ರ ಅಧಿಸೂಚನೆಗೆ ಉತ್ತರವಾಗಿ ಈಗಾಗಲೇ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳು ಮತ್ತೆ ಅರ್ಜಿ ಸಲ್ಲಿಸುವಂತಿಲ್ಲ. ಒಂದುವೇಳೆ ಅರ್ಜಿ ಸಲ್ಲಿಸಿ ಶುಲ್ಕ ಪಾವತಿಸದಿದ್ದಲ್ಲಿ ಪ್ರಸ್ತುತ, ಅಂತಹ ಅಭ್ಯರ್ಥಿಗಳು ಶುಲ್ಕವನ್ನು ಪಾವತಿಸಬಹುದು.**

**2) ಈ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಯ ದಿನಾಂಕವನ್ನು ತದನಂತರದಲ್ಲಿ ಪ್ರಕಟಿಸಲಾಗುವುದು.**

ಅರ್ಜಿಗಳನ್ನು ಆನ್–ಲೈನ್ (On-line) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು, ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.

2. **ಪರೀಕ್ಷಾ ಶುಲ್ಕ:–**

| | |
|---|---|
| ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | **₹ 300/–** |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1 ಮತ್ತು ಅಂಗವಿಕಲ ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳಿಗೆ | **₹ 25/–** |

**1) ನಿಗದಿತ ಶುಲ್ಕವನ್ನು ಸಿಂಡಿಕೇಟ್ ಬ್ಯಾಂಕಿನ ಯಾವುದಾದರೂ ಶಾಖೆಗಳಲ್ಲಿ ಬ್ಯಾಂಕಿನ ವೇಳೆಯಲ್ಲಿ ಚಲನ್ ನೀಡಿ ಹಣ ಪಾವತಿಸಬಹುದು.**

**2) ಅಭ್ಯರ್ಥಿಗಳು ಯಾವುದೇ ತಪ್ಪು ಮಾಹಿತಿಯನ್ನು ನೀಡದೇ ಅರ್ಜಿ ಭರ್ತಿ ಮಾಡಲು On-Line ನಲ್ಲಿ ನೀಡಿರುವ ಸೂಚನೆಗಳನ್ವಯ ಭರ್ತಿ ಮಾಡತಕ್ಕದ್ದು.**

**3) ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದಲ್ಲಿ ಅಂತಹವರ ವಿರುದ್ಧ ಆಯೋಗವು ಕಾನೂನಿನನ್ವಯ ಸೂಕ್ತ ಕ್ರಮ ಕೈಗೊಳ್ಳುವುದು.**

**3. ಅಭ್ಯರ್ಥಿಗಳು ವಿದ್ಯುನ್ಮಾನ ಮಾರ್ಗ (On-line) ಮೂಲಕ ಅರ್ಜಿ ಸಲ್ಲಿಸುವ ಮತ್ತು ಶುಲ್ಕ ಸಂದಾಯ ಮಾಡುವ ವಿಧಾನಗಳು:–**

**ಹಂತ 1:–** ಅಭ್ಯರ್ಥಿಗಳು ಆಯೋಗದ ಅಧಿಕೃತ ವೆಬ್‌ಸೈಟ್ **"http://kpsc.kar.nic.in"**ನ್ನು ತೆರೆದ ಕೂಡಲೇ ಕಂಪ್ಯೂಟರ್ ಪರದೆಯ ಮೇಲೆ '**Application For Second Division Accounts Assistant**' ಎಂದು ಮೂಡುತ್ತದೆ ಮತ್ತು ಅಧಿಸೂಚನೆ ಹಾಗೂ ಅಭ್ಯರ್ಥಿಗಳಿಗೆ ಸೂಚನೆಗಳು/ಪರೀಕ್ಷಾ ಶುಲ್ಕ/ಬ್ಯಾಂಕಿನ ವಿವರಗಳು ಲಭ್ಯವಾಗಲಿದ್ದು, ಅಭ್ಯರ್ಥಿಗಳು ಅಧಿಸೂಚನೆಯಲ್ಲಿನ ವಿವರಗಳನ್ನು ಮತ್ತು ಅರ್ಜಿ ಸಲ್ಲಿಸುವ ಸೂಚನೆಗಳನ್ನು ತಪ್ಪದೇ ಓದಿಕೊಂಡು ಅದರಂತೆ ಅರ್ಜಿಯನ್ನು ಭರ್ತಿಮಾಡತಕ್ಕದ್ದು.

**ಹಂತ 2:–** ಅರ್ಜಿಯನ್ನು ಭರ್ತಿಮಾಡುವ ಮುನ್ನ ಅಭ್ಯರ್ಥಿಯು ತನ್ನ ಇತ್ತೀಚೆಗಿನ ಭಾವಚಿತ್ರವನ್ನು ಒಂದು ಸ್ವಚ್ಛವಾದ ಬಿಳಿಯ ಹಾಳೆಯ ಮೇಲೆ ಲಗತ್ತಿಸಿ ಅದರ ಕೆಳಗೆ ಕಪ್ಪು ಶಾಯಿಯ ಸ್ಕೆಚ್/ಮಾರ್ಕರ್ ಪೆನ್ನಿನಿಂದ ಸಹಿಯನ್ನು ಮಾಡಿ (ಯಾವುದೇ ಕಾರಣಕ್ಕೂ ಭಾವ ಚಿತ್ರದ ಮೇಲೆ ಸಹಿ ಮಾಡಬಾರದು) ನಂತರ ಭಾವಚಿತ್ರ **(Photo)** ಮತ್ತು ಸಹಿಯನ್ನು ಒಳಗೊಂಡಂತೆ ಈ ಕೆಳಗಿನ ಅಳತೆ ಪ್ರಕಾರ ಸ್ಕ್ಯಾನ್ ಮಾಡಿ ಇಟ್ಟುಕೊಂಡಿರತಕ್ಕದ್ದು.

| | |
|---|---|
| o ಫೈಲ್ ಅಳತೆ<100 ಕೆಬಿ | **ಪಾಸ್ ಪೋರ್ಟ್ ಭಾವಚಿತ್ರದ ಅಳತೆಗಳು:**<br>45 ಎಂ.ಎಂ (ಉದ್ದ) X 35 ಎಂ.ಎಂ (ಅಗಲ)<br><br>**ಸಹಿ ಅಳತೆ:**<br>20ಎಂ.ಎಂ (ಉದ್ದ) X 35 ಎಂ.ಎಂ (ಅಗಲ) |
| o ಡಿಪಿಐ ಹಿನ್ನೆಲೆ=100 ಡಿಪಿಐ | |
| o ಇಮೇಜ್ ಅಳತೆ=100% | |
| o ಕಲರ್ | |
| o ಜೆಪಿಇಜಿ **(jpeg)** | |

**ಹಂತ 3:– 'Application For Second Division Accounts Assistant'** ಮೇಲೆ ಕ್ಲಿಕ್ ಮಾಡಿ ಅರ್ಜಿಯನ್ನು ಭರ್ತಿಮಾಡತಕ್ಕದ್ದು. ಅರ್ಜಿಯನ್ನು ಭರ್ತಿಮಾಡಿದ ನಂತರ ನಮೂದಿಸಿರುವ ವಿವರಗಳನ್ನು ಮತ್ತೊಮ್ಮೆ ಕೂಲಂಕಷವಾಗಿ ಪರಿಶೀಲಿಸಬೇಕು. ಅರ್ಜಿಯಲ್ಲಿ ನಮೂದಿಸಿರುವ ವಿವರಗಳಲ್ಲಿ ಏನಾದರೂ ತಪ್ಪುಗಳಾಗಿದ್ದಲ್ಲಿ ಅದನ್ನು ಸರಿಪಡಿಸಲು **Edit** ಮೇಲೆ ಕ್ಲಿಕ್ ಮಾಡಿ ನಂತರ ಅಗತ್ಯ ತಿದ್ದುಪಡಿಗಳನ್ನು ಮಾಡಬಹುದು.

**ಹಂತ 4:–** ಅರ್ಜಿಯಲ್ಲಿ ಭರ್ತಿ ಮಾಡಿರುವ ಎಲ್ಲಾ ವಿವರಗಳು ಸರಿಯಾಗಿರುತ್ತವೆಯೆಂದು ಮನದಟ್ಟು ಮಾಡಿಕೊಂಡು ನಂತರ ಸ್ಕ್ಯಾನ್ ಮಾಡಿಟ್ಟುಕೊಂಡಿರುವ ಭಾವಚಿತ್ರ (**Photo**)ವನ್ನು **upload** ಮಾಡತಕ್ಕದ್ದು. **Photo upload** ಮಾಡಿದ ನಂತರ ಅರ್ಜಿಯಲ್ಲಿನ ವಿವರಗಳು ಸರಿಯಾಗಿರುತ್ತವೆಯೆಂದು ಒಪ್ಪಿರುತ್ತೇನೆ (**I agree**) ಎಂಬ ಘೋಷಣೆಯ ಮೇಲೆ ಕ್ಲಿಕ್ ಮಾಡತಕ್ಕದ್ದು, ಅನಂತರವೇ **Generate Challan** ಮತ್ತು **Application Preview** ಮೂಡಲಿದ್ದು, ಎರಡನ್ನೂ **Download** ಮಾಡಿ ಕೊಳ್ಳತಕ್ಕದ್ದು. ಮತ್ತು ಅರ್ಜಿಯ ಪ್ರತಿಯನ್ನು ಮತ್ತು ಶುಲ್ಕ ಸಂದಾಯ ಮಾಡಿದ ಚಲನ್‌ಅನ್ನು ಕಡ್ಡಾಯವಾಗಿ ಅಭ್ಯರ್ಥಿಗಳು ತಮ್ಮೊಂದಿಗೆ ಇಟ್ಟುಕೊಳ್ಳತಕ್ಕದ್ದು. ಆಯೋಗವು ಅಪೇಕ್ಷಿಸಿದಾಗ ಈ ಚಲನ್ ಅನ್ನು ಹಾಜರುಪಡಿಸಬೇಕು.

**ಹಂತ 5:– Download** ಮಾಡಿಕೊಳ್ಳಲಾದ **Challan** ನಲ್ಲಿರುವ ಶುಲ್ಕವನ್ನು ಸಿಂಡಿಕೇಟ್ ಬ್ಯಾಂಕಿನ ಯಾವುದೇ ಶಾಖೆಗಳಲ್ಲಿ ಚಲನ್ ನೀಡಿ ಹಣ ಸಂದಾಯ ಮಾಡಬಹುದಾಗಿರುತ್ತದೆ. ಶುಲ್ಕವನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಶುಲ್ಕವನ್ನು ಸಂದಾಯ ಮಾಡಲು ಅವಕಾಶವಿರುವುದಿಲ್ಲ. ಸಿಂಡಿಕೇಟ್ ಬ್ಯಾಂಕ್ ಅನ್ನು ಹೊರತುಪಡಿಸಿ ಇತರೆ ಯಾವುದೇ ಬ್ಯಾಂಕಿನಲ್ಲಿ ಶುಲ್ಕ ಸಂದಾಯ ಮಾಡುವಂತಿಲ್ಲ. ಡಿ.ಡಿ., ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ. ಶುಲ್ಕ ಸಂದಾಯ ಮಾಡದ ಅರ್ಜಿಗಳನ್ನು ತಿರಸ್ಕೃತಗೊಳಿಸಲಾಗುವುದು.

**3.1** ಅಭ್ಯರ್ಥಿಗಳು ತಮ್ಮ ಅರ್ಜಿಯ ಸ್ಥಿತಿಯನ್ನು ತಿಳಿಯಬೇಕಾದಲ್ಲಿ, ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ ಐದು ದಿನಗಳ ತರುವಾಯು, ಆಯೋಗದ ವೆಬ್‌ಸೈಟ್‌ನ **Check Status** ಲಿಂಕಿನಲ್ಲಿ ಮಾಹಿತಿಗಳನ್ನು ದಾಖಲಿಸಿ, ಅರ್ಜಿಯು ಸಿಂಧುವಾಗಿರುವ ಬಗ್ಗೆ ಮಾಹಿತಿಯನ್ನು ಪಡೆಯಬಹುದಾಗಿರುತ್ತದೆ.

**3.2 ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ. ಅಥವಾ ಅದನ್ನು ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.**

- ➡ **ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ: 23–11–2012.**
- ➡ **ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 07–12–2012.**
- ➡ **ಪರೀಕ್ಷಾ ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ: 08–12–2012.**

**ವಿಶೇಷ ಸೂಚನೆ: On-line ಮೂಲಕ ಅರ್ಜಿಯನ್ನು ಭರ್ತಿಮಾಡುವ ಸಂದರ್ಭದಲ್ಲಿ ತಾಂತ್ರಿಕ ತೊಂದರೆ ಅಥವಾ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ (Help line) 9740977411 ಮತ್ತು 9741966115 ಅನ್ನು ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.**

**4. ಅರ್ಹತಾ ಷರತ್ತುಗಳು:**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ವಿವಾಹವಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಗಳು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

**5. ಶೈಕ್ಷಣಿಕ ವಿದ್ಯಾರ್ಹತೆ:–**

ಅ) ಪಿ.ಯು.ಸಿ. ಅಥವಾ 10 + 2 ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು.

ಆ) ಕಂಪ್ಯೂಟರ್ ಜ್ಞಾನವುಳ್ಳವರಾಗಿರಬೇಕು

**ಸೂಚನೆ:– 1) ಈ ಮೇಲ್ಕಂಡ ವಿದ್ಯಾರ್ಹತೆಯನ್ನು ಹೊರತುಪಡಿಸಿ ಜೆ.ಒ.ಸಿ., ಡಿಪ್ಲೊಮೋ ಇನ್ನಿತರ ಯಾವುದೇ ವಿದ್ಯಾರ್ಹತೆಗಳನ್ನು ಈ ಹುದ್ದೆಗಳಿಗೆ ಪರಿಗಣಿಸಲಾಗುವುದಿಲ್ಲ.**

**2) ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಈ ಮೇಲಿನ ನಿಗದಿತ ವಿದ್ಯಾರ್ಹತೆಯ ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಾಗಿರುವುದಿಲ್ಲ.**

**6. ಹುದ್ದೆಗಳ ವರ್ಗೀಕರಣ:–**

**ಈ ಹುದ್ದೆಗಳ ವರ್ಗೀಕರಣದ ವಿವರವನ್ನು ಅನುಬಂಧ–01ರಲ್ಲಿ ತೋರಿಸಿದೆ.**

ಅನುಬಂಧದಲ್ಲಿ ತೋರಿಸಿರುವ ವಿವಿಧ ಜಿಲ್ಲೆಗಳ ಗ್ರಾಮಪಂಚಾಯಿತಿಗಳಲ್ಲಿ ಖಾಲಿಯಿರುವ ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ, **ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣದಲ್ಲಿ ಬದಲಾವಣೆಯಾದಲ್ಲಿ ಅಂದರೆ ಕಡಿಮೆಯಾದಲ್ಲಿ ತಿದ್ದುಪಡಿ ಮತ್ತು ಹೆಚ್ಚಾದಲ್ಲಿ ಸೇರ್ಪಡೆ ಅಧಿಸೂಚನೆಯ ಮೂಲಕ ಪ್ರಕಟಿಸಲಾಗುವುದು. ಅಂತಿಮವಾಗಿ ಆಯ್ಕೆ ಹಂತಕ್ಕೆ ಬರುವ ಅಭ್ಯರ್ಥಿಗಳಿಗೆ ಮಾತ್ರ ಸಂದರ್ಶನ ಸಮಯದಲ್ಲಿ ಅವರುಗಳು ಜಿಲ್ಲಾವಾರು ಆಯ್ಕೆಗೆ ಆದ್ಯತೆಯನ್ನು ನೀಡುವ ಸಲುವಾಗಿ ಹುದ್ದೆಗಳ ವರ್ಗೀಕರಣವನ್ನು ಒದಗಿಸಲಾಗುವುದು.**

**7. ವೇತನ ಶ್ರೇಣಿ :–**

₹ 11600–200–12000–250–13000–300–14200–350–15600–400–17200–450–19000–500–21000

**ಪಿಂಚಣಿ ಸೌಲಭ್ಯ:** ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ:31.03.2006ರಂತೆ. ನೂತನ ಅಂಶದಾಯಿ ಪಿಂಚಣಿ ಸೌಲಭ್ಯ ಅನ್ವಯವಾಗುವುದು.

**8. ವಯೋಮಿತಿ:–** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ) ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು

ಆ) ಗರಿಷ್ಠ ವಯೋಮಿತಿ :

| | |
|---|---|
| **ಸಾಮಾನ್ಯ ವರ್ಗ** | **35 ವರ್ಷ** |
| **2ಎ,2ಬಿ,3ಎ,3ಬಿ** | **38 ವರ್ಷ** |
| **ಪ.ಜಾ/ಪ.ಪಂ/ಪ್ರ–1** | **40 ವರ್ಷ** |

**ಅಭ್ಯರ್ಥಿಗಳ ಜನ್ಮ ದಿನಾಂಕವನ್ನು ಅವರ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರ, ವರ್ಗಾವಣೆ ಪ್ರಮಾಣ ಪತ್ರ (ಟಿ.ಸಿ) ಕ್ಯುಮುಲೇಟಿವ್ ರೆಕಾರ್ಡ್‌ನಲ್ಲಿ ನಮೂದಿಸಿರುವಂತೆ ಪರಿಗಣಿಸಲಾಗುವುದು. ಇವುಗಳನ್ನು ಹೊರತುಪಡಿಸಿ ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.**

**ಈ ಮುಂದಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಈ ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.**

- ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ

ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

- ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದಾರೋ ಅಷ್ಟು ವರ್ಷಗಳ ಅಥವಾ ಐದು ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

- ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ: 1)** (ಎ) ಮಾಜಿ ಸೈನಿಕ ಎಂದರೆ ಸಶಸ್ತ್ರದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧರಲ್ಲದ ಹುದ್ದೆಗಳಲ್ಲಿ) ಸೇವೆ ಸಲ್ಲಿಸಿದ ವ್ಯಕ್ತಿ. ಆದರೆ ಡಿಫೆನ್ಸ್ ಸೆಕ್ಯುರಿಟಿಕೋರ್, ಜನರಲ್ ರಿಸರ್ವ್ ಇಂಜಿನೀಯರಿಂಗ್ ಫೋರ್ಸ್, ಲೋಕಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ: ಮತ್ತು (ಬಿ) ಕೇಂದ್ರ ಸಶಸ್ತ್ರದಳಗಳಲ್ಲಿ ಸೇವೆ ಸಲ್ಲಿಸುವಾಗ ಹತರಾದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

(ಅ) ಮೇಲ್ಕಂಡ ದಳದ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಲ್ಲಿ ಬಿಡುಗಡೆಯಾದವನು

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇನೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಅಭ್ಯರ್ಥಿಗಳು ಮಾಜಿ ಸೈನಿಕ ಮೀಸಲಾತಿಗೆ ಅರ್ಹರಿರುತ್ತಾರೆ.

1. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು
2. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆಯಿಂದ ಬಿಡುಗಡೆಯಾದ ವ್ಯಕ್ತಿ.
3. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು

**ವಿವರಣೆ: 2)** ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿರುವ ವ್ಯಕ್ತಿಗಳು ಸೇವೆಯಿಂದ ನಿವೃತ್ತಿಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವ ವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

- ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣ ಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕ್ಯಾಡೆಟ್ ಪರಿವೀಕ್ಷಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

- ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮಸಮೂಹ ಪರಿಶೀಲಕರಾಗಿ ಈಗ ಕೆಲಸಮಾಡುತ್ತಿದ್ದರೆ, ಅಥವಾ ಹಿಂದೆ ಆ ಕೆಲಸದಲ್ಲಿದ್ದ ಪಕ್ಷದಲ್ಲಿ ಅಂತಹ ಗ್ರಾಮ ಸಮೂಹ ಪರಿಶೀಲಕರಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು

- ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು
- ಅಭ್ಯರ್ಥಿಯು ಜೀತಕಾರ್ಮಿಕನಾಗಿದ್ದ ಪಕ್ಷದಲ್ಲಿ 10 ವರ್ಷಗಳು

  ಜೀತ ಕಾರ್ಮಿಕನಾಗಿದ್ದ ಅಭ್ಯರ್ಥಿಯು ವಯೋಮಿತಿ ಸಡಿಲಿಕೆ ಪಡೆಯಲು ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್ ರಿಂದ ಪಡೆದಿಟ್ಟುಕೊಂಡಿರತ್ತದ್ದು.
- ಅಂಗವಿಕಲ ಅಭ್ಯರ್ಥಿಗಳಿಗೆ 10 ವರ್ಷಗಳು

**9. ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ:**

ಕಂಪ್ಯೂಟರ್ ಸಾಕ್ಷರತಾ ಅರ್ಹತಾ ಪರೀಕ್ಷೆಗೆ ಗರಿಷ್ಠ 30 ಅಂಕಗಳನ್ನು ನಿಗದಿಪಡಿಸಿದ್ದು, ಈ ಅರ್ಹತಾ ಪರೀಕ್ಷೆಯಲ್ಲಿ ಕನಿಷ್ಠ ಶೇ. 35 ಅಂದರೆ 11 ಅಂಕಗಳನ್ನು ಗಳಿಸತಕ್ಕದ್ದು. ಕಂಪ್ಯೂಟರ್ ಸಾಕ್ಷರತಾ ಅರ್ಹತಾ ಪರೀಕ್ಷೆಯಲ್ಲಿನ ಅರ್ಹತೆ ಹೊಂದಿದಲ್ಲಿ ಮಾತ್ರ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳ ಜೇಷ್ಠತೆ ಮತ್ತು ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಅನುಸಾರ ಆಯ್ಕೆ ಮಾಡಲಾಗುವುದು. ಕಂಪ್ಯೂಟರ್ ಸಾಕ್ಷರತಾ ಅರ್ಹತಾ ಪರೀಕ್ಷೆಯಲ್ಲಿ ಕನಿಷ್ಠ ಶೇ. 35 ಅಂಕಗಳನ್ನು ಪಡೆಯದ ಅಭ್ಯರ್ಥಿಗಳನ್ನು ಮುಂದಿನ ನೇಮಕಾತಿ ಪ್ರಕ್ರಿಯೆಗೆ ಪರಿಗಣಿಸಲಾಗುವುದಿಲ್ಲ. ಕಂಪ್ಯೂಟರ್ ಸಾಕ್ಷರತಾ ಅರ್ಹತಾ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳನ್ನು ಜೇಷ್ಠತಾ ಅಂಕಗಳಿಗೆ ಪರಿಗಣಿಸಲಾಗುವುದಿಲ್ಲ. ಪಠ್ಯಕ್ರಮವನ್ನು ಅನುಬಂಧ–02ರಲ್ಲಿ ತೋರಿಸಲಾಗಿದೆ)

9.1 **ಕಡ್ಡಾಯ ಕನ್ನಡ ಪರೀಕ್ಷೆ:** (ಪಠ್ಯಕ್ರಮವನ್ನು ಅನುಬಂಧ–03ರಲ್ಲಿ ನೋಡತಕ್ಕದ್ದು)ತಾಂತ್ರಿಕೇತರ ಹುದ್ದೆಗಳ ಸಂದರ್ಶನಕ್ಕೆ ಅರ್ಹರಾಗಲು ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ. ಪರೀಕ್ಷೆಯ ಕನ್ನಡ ಪ್ರಥಮ ಭಾಷೆಯ ಮಟ್ಟದ 150 ಅಂಕಗಳಿಗೆ ಪರೀಕ್ಷೆ ನಡೆಸಲಿದ್ದು, ಅದರಲ್ಲಿ ಕನಿಷ್ಠ 50 ಅಂಕಗಳೊಂದಿಗೆ ಕಡ್ಡಾಯವಾಗಿ ತೇರ್ಗಡೆ ಹೊಂದಲೇಬೇಕು. ನಿಗದಿಪಡಿಸಿದ ಕನಿಷ್ಠ 50 ಅಂಕಗಳನ್ನು ಪಡೆಯದ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಾಗುವುದಿಲ್ಲ. ಕನ್ನಡ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ, ಪರಂತು ಎಸ್.ಎಸ್.ಎಲ್.ಸಿ ಅಥವಾ ಅದಕ್ಕೆ ತತ್ಸಮಾನವೆಂದು ಘೋಷಿಸಲ್ಪಟ್ಟ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್.ಎಲ್.ಸಿ.ಗಿಂತ ಮೇಲ್ಮಟ್ಟದ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಮುಖ್ಯ ಭಾಷೆ/ದ್ವಿತೀಯ ಭಾಷೆ ಅಥವಾ ಐಚ್ಛಿಕ ವಿಷಯವಾಗಿ (ಆದರೆ ಸಂಯುಕ್ತ ಪತ್ರಿಕೆಯ ವಿಷಯಗಳಲ್ಲೊಂದಾಗಿರಬಾರದು) ಅಥವಾ ಮೇಲಿನ ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿ ತೇರ್ಗಡೆಯಾಗಿದ್ದರೆ ಅಥವಾ ಲೋಕಸೇವಾ ಆಯೋಗದಿಂದ ಈ ಹಿಂದೆ ನಡೆಸಲ್ಪಟ್ಟ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಲ್ಲಿ, ಕನ್ನಡ ಭಾಷಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವ ಬಗ್ಗೆ ವಿನಾಯಿತಿ ನೀಡಲಾಗುವುದು.

ಕಡ್ಡಾಯ ಕನ್ನಡ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಗಳ ಸಾಮಾನ್ಯ ಪತ್ರಿಕೆ ಮತ್ತು ನಿರ್ದಿಷ್ಟ ಪತ್ರಿಕೆಗಳನ್ನು ಮಾತ್ರ ಮೌಲ್ಯಮಾಪನ ಮಾಡಲಾಗುವುದು. ಕನ್ನಡ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳನ್ನು ಗಳಿಸದ ಅಭ್ಯರ್ಥಿಗಳ ಸಾಮಾನ್ಯ ಮತ್ತು ನಿರ್ದಿಷ್ಟ ಪತ್ರಿಕೆಯ ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ

**10. ಸ್ಪರ್ಧಾತ್ಮಕ ಪರೀಕ್ಷೆ:–**

ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006 ಹಾಗೂ ಅದರ ತಿದ್ದುಪಡಿಗಳನ್ವಯ ತಾಂತ್ರೀಕೇತರ ಹುದ್ದೆಗಳಾದ ಈ ಹುದ್ದೆಗಳಿಗೆ ಆಯೋಗವು ಸ್ಪರ್ಧಾತ್ಮಕ ಪರೀಕ್ಷೆಯನ್ನು ಕೆಳಕಂಡ ರೀತಿಯಲ್ಲಿ ನಡೆಸುತ್ತದೆ.

ಈ ಸ್ಪರ್ಧಾತ್ಮಕ ಪರೀಕ್ಷೆಯು ವಸ್ತು ನಿಷ್ಠ ಬಹು ಆಯ್ಕೆ(Objective Multiple Choice) ಮಾದರಿಯದಾಗಿದೆ. ತಲಾ 200 ಅಂಕಗಳ 02 ಪತ್ರಿಕೆಗಳಿರುತ್ತವೆ. ಅವು:–

**ಪತ್ರಿಕೆ–1–(ಸಾಮಾನ್ಯ ಪತ್ರಿಕೆ) (General Paper)-200 ಅಂಕಗಳು– 1 1/2 ಗಂಟೆ:**

ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಲ್ಲಿ ಉತ್ತೀಣರಾದ ವ್ಯಕ್ತಿಯಿಂದ ನಿರೀಕ್ಷಿಸಬಹುದಾದ ಸಾಮಾನ್ಯ ಜ್ಞಾನದ ವಿಷಯಗಳಿಗೆ ಸಂಬಂಧಿಸಿದಂತೆ ಪ್ರಚಲಿತ ವಿದ್ಯಮಾನಗಳು, ಸಾಮಾನ್ಯ ವಿಜ್ಞಾನಗಳು, ಭಾರತದ ಇತಿಹಾಸ, ಭೂಗೋಳ, ಸಮಾಜ ವಿಜ್ಞಾನ ಮತ್ತು ದಿನನಿತ್ಯ ಗಮನಿಸಬಹುದಾದ ವಿಷಯಗಳು ಪ್ರಾಯೋಗಿಕ ಜ್ಞಾನ ಹಾಗೂ ಸಾಮಾನ್ಯ ಬೌದ್ಧಿಕ ಸಾಮರ್ಥ್ಯವನ್ನು ಒಳಗೊಂಡಿರುತ್ತದೆ.

**ಪತ್ರಿಕೆ–2–(ನಿರ್ದಿಷ್ಟ ಪತ್ರಿಕೆ) (Specific Paper)–200 ಅಂಕಗಳು– 2 ಗಂಟೆ:**

ಈ ಹುದ್ದೆಗಳ ಕಾರ್ಯ ಸ್ವರೂಪಕ್ಕೆ ಸಂಬಂಧಿಸಿದ ಪಠ್ಯಕ್ರಮವನ್ನು ಒಳಗೊಂಡಿರುತ್ತದೆ. (ಪಠ್ಯಕ್ರಮವನ್ನು ಅನುಬಂಧ–04ರಲ್ಲಿ ತೋರಿಸಲಾಗಿದೆ.)

**ಸೂಚನೆ:** ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಗಳೆರಡರಲ್ಲೂ ಇರುತ್ತದೆ. ಕನ್ನಡ ಭಾಷೆಯಲ್ಲಿರುವ ಪ್ರಶ್ನೆಗಳ ಭಾಷಾಂತರದಲ್ಲಿ ಏನಾದರೂ ಅಸ್ಪಷ್ಟತೆ ಇದ್ದಲ್ಲಿ ಅಭ್ಯರ್ಥಿಗಳು ಆಂಗ್ಲ ಭಾಷೆಯಲ್ಲಿರುವ ಪ್ರಶ್ನೆಗಳನ್ನು ನೋಡುವುದು.

**ಟಿಪ್ಪಣಿ:** – ಪ್ರಶ್ನೆ ಪತ್ರಿಕೆ ಬಗ್ಗೆ ಯಾವುದೇ ಬಗೆಯ ಆಕ್ಷೇಪಣೆ ಇದ್ದಲ್ಲಿ, ಪರೀಕ್ಷಾ ಕೇಂದ್ರವನ್ನು ಬಿಡುವ ಮೊದಲು ಪರೀಕ್ಷಾ ದಿನದಂದೇ ಸಂಬಂಧಿತ ಮೇಲ್ವಿಚಾರಕರ ಮುಖಾಂತರ ಅಭ್ಯರ್ಥಿಯ ಹೆಸರು, ವಿಳಾಸ, ನೋಂದಣಿ ಸಂಖ್ಯೆ ಇತ್ಯಾದಿಗಳನ್ನು ನಮೂದಿಸಿರುವ ಲಿಖಿತ ಮನವಿಯನ್ನು ಆಯೋಗಕ್ಕೆ ಸಲ್ಲಿಸಿ ಸ್ವೀಕೃತಿ (Acknowledgement) ಪಡೆಯಬೇಕು. ಪರೀಕ್ಷಾ ಕೇಂದ್ರ ಬಿಟ್ಟ ನಂತರ ಕಳುಹಿಸುವ ಯಾವುದೇ ಆಕ್ಷೇಪಣೆಯನ್ನು ಮಾನ್ಯ ಮಾಡಲಾಗುವುದಿಲ್ಲ.

**10.1 ಸ್ಪರ್ಧಾತ್ಮಕ ಪರೀಕ್ಷೆಯನ್ನು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಮತ್ತು ಆಯೋಗವು ನಿಗದಿಪಡಿಸುವ ಇತರೆ ಯಾವುದೇ ಕೇಂದ್ರಗಳಲ್ಲಿ ನಡೆಸಲಾಗುವುದು. ಅಭ್ಯರ್ಥಿಗಳು ಅರ್ಜಿಯಲ್ಲಿ ಅವರು ಸ್ಪರ್ಧಾತ್ಮಕ ಪರೀಕ್ಷೆ ತೆಗೆದುಕೊಳ್ಳಲು ಇಚ್ಚಿಸುವ ಕೇಂದ್ರವನ್ನು ನಮೂದಿಸತಕ್ಕದ್ದು. ಆದರೂ, ತಾಲ್ಲೂಕು ಕೇಂದ್ರಗಳಲ್ಲಿ ಪರೀಕ್ಷೆ ನಡೆಸುವ ಸನ್ನಿವೇಶ ಎದುರಾದಲ್ಲಿ ಅರ್ಜಿಯಲ್ಲಿ ಅಭ್ಯರ್ಥಿಗಳು ನೀಡಿರುವ ವಿಳಾಸವನ್ನಾಧರಿಸಿ ತಾಲ್ಲೂಕು ಕೇಂದ್ರಗಳಲ್ಲಿಯೂ ಸಹ ಪರೀಕ್ಷೆ ನಡೆಸಲಾಗುವುದು. ಪರೀಕ್ಷಾ ಕೇಂದ್ರಗಳನ್ನು ನಿಗದಿಪಡಿಸುವುದು ಆಯೋಗದ ಅಂತಿಮ ತೀರ್ಮಾನವಾಗಿರುತ್ತದೆ.**

**ಪರೀಕ್ಷೆಗಳ ದಿನಾಂಕವನ್ನು ಮುಂದೆ ಜಾಹೀರಾತು ಪಡಿಸಲಾಗುವುದು ಹಾಗೂ ಆಯೋಗದ ವೆಬ್ ಸೈಟ್ "http://kpsc.kar.nic.in" ನಲ್ಲಿ ಬಿತ್ತರಿಸಲಾಗುವುದು. ಪರೀಕ್ಷೆಗಳ ದಿನಾಂಕಗಳನ್ನು ಅಧಿಸೂಚಿಸಿದಾಗ ಪ್ರವೇಶ ಪತ್ರಗಳನ್ನು ಆಯೋಗದ ಅಂತರ್ಜಾಲದಿಂದ ಅಭ್ಯರ್ಥಿಗಳು ಡೌನ್ ಲೋಡ್ ಮಾಡಿಕೊಳ್ಳಬೇಕು. ಅಭ್ಯರ್ಥಿಗಳಿಗೆ ಪ್ರವೇಶ ಪತ್ರಗಳನ್ನು ಪ್ರತ್ಯೇಕವಾಗಿ ರವಾನಿಸಲಾಗುವುದಿಲ್ಲ.**

**11. ನೇಮಕಾತಿ ವಿಧಾನ:**

ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಆಯ್ಕೆ ಮೂಲಕ ನೇರನೇಮಕಾತಿ) (ಸಾಮಾನ್ಯ) ನಿಯಮಗಳು 2006 ಮತ್ತು ಅದರ ತಿದ್ದುಪಡಿಗಳನ್ವಯ ಆಯೋಗವು ನಡೆಸುವ ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಸಂದರ್ಶನದಲ್ಲಿ ಅಭ್ಯರ್ಥಿಗಳು ಗಳಿಸಿದ ಅಂಕಗಳ ಜೇಷ್ಠತೆ ಮತ್ತು ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಗಳನುಸಾರ ಇರುವ ಮೀಸಲಾತಿಯನ್ವಯ ಅಂತಿಮವಾಗಿ ಲಭ್ಯವಾಗುವ ಖಾಲಿ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ ಆಯ್ಕೆ ಪಟ್ಟಿ ತಯಾರಿಸಲಾಗುವುದು.

(ಅ) ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಗಳಿಸುವ ಒಟ್ಟು ಅಂಕಗಳ ಶೇಕಡಾವಾರು ಆಧಾರದ ಮೇಲೆ ಅರ್ಹತಾ ಪಟ್ಟಿಯನ್ನು ತಯಾರಿಸಲಾಗುವುದು.

(ಆ) ಈ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಇಬ್ಬರು ಅಥವಾ ಹೆಚ್ಚು ಅಭ್ಯರ್ಥಿಗಳು ಸಮಾನ ಅಂಕಗಳನ್ನು ಗಳಿಸಿದರೆ, ಅಂಕಗಳ ಅರ್ಹತಾ ಪಟ್ಟಿ ತಯಾರಿಸುವಾಗ ಅಂತಹ ಅಭ್ಯರ್ಥಿಗಳ ಅರ್ಹತೆಯನ್ನು ವಯಸ್ಸಿನ ಆಧಾರದ ಮೇಲೆ ನಿಗದಿಪಡಿಸಿ, ವಯಸ್ಸಿನಲ್ಲಿ ಹಿರಿಯರಾದವರನ್ನು ಅರ್ಹತಾ ಪಟ್ಟಿಯಲ್ಲಿ ಜೇಷ್ಠತಾನುಕ್ರಮದಲ್ಲಿ ಪರಿಗಣಿಸಲಾಗುವುದು.

(ಇ) ಮೀಸಲಾತಿ ನಿಯಮಾನುಸಾರ 'ಅ' ಪಟ್ಟಿಯಲ್ಲಿನ ಅಭ್ಯರ್ಥಿಗಳ ಪೈಕಿ 1:3ರ ಅನುಪಾತದಲ್ಲಿ ಅರ್ಹ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು.

(ಈ) ಸ್ಪರ್ಧಾತ್ಮಕ ಪರೀಕ್ಷೆಗೆ ನಿಗದಿಪಡಿಸಿದ ಒಟ್ಟು ಅಂಕಗಳ ಶೇಕಡ 12.5ರಷ್ಟು (ಅಂದರೆ 50) ಅಂಕಗಳು ಸಂದರ್ಶನಕ್ಕೆ ಗರಿಷ್ಠ ಅಂಕಗಳಾಗಿರುತ್ತದೆ.

**ಸಂದರ್ಶನ:–** ಸಂದರ್ಶನಕ್ಕೆ ಅರ್ಹರಾಗುವ ಅಭ್ಯರ್ಥಿಗಳ ಸಂದರ್ಶನವನ್ನು ಆಯೋಗವು ನಡೆಸಿ ಸಂದರ್ಶನದಲ್ಲಿ ಅವರು ವ್ಯಕ್ತಪಡಿಸುವ ಸಾಮರ್ಥ್ಯತೆಯ ಅನುಸಾರ ನೀಡುವ ಅಂಕಗಳನ್ನು ಸಂದರ್ಶನ ನಡೆದ ದಿನ ಅಥವಾ ಮುಂದಿನ ದಿನದಂದು ಕಛೇರಿಯ ಪ್ರಕಟಣಾ ಫಲಕದಲ್ಲಿ ಮತ್ತು ಆಯೋಗದ ವೆಬ್‌ಸೈಟ್‌ನಲ್ಲಿ (ಅಂತರ್ಜಾಲದಲ್ಲಿ) ಪ್ರಕಟಿಸಲಾಗುವುದು.

**12. ಪ್ರಮುಖ ಸೂಚನೆಗಳು:**

**12.1. ಜಾತಿ ಮೀಸಲಾತಿ ಪ್ರಮಾಣ ಪತ್ರಗಳು:**

ಜಾತಿ ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು

- ಪ.ಜಾ/ಪ.ಪಂ. ಅಭ್ಯರ್ಥಿಗಳು ನಮೂನೆ 'ಡಿ' ರಲ್ಲಿ
- ಪ್ರವರ್ಗ–1ರ ಅಭ್ಯರ್ಥಿಗಳು ನಮೂನೆ 'ಇ' ನಲ್ಲಿ ಹಾಗೂ

- 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ 'ಎಫ್' ನಲ್ಲಿ ಸಂಬಂಧಿತ ತಹಶೀಲ್ದಾರರವರಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರಬೇಕು.

ಹಿಂದುಳಿದ ವರ್ಗಗಳಾದ ಪ್ರ–2ಎ, ಪ್ರ–2ಬಿ, ಪ್ರ–3ಎ ಮತ್ತು ಪ್ರ–3ಬಿ ವರ್ಗದ ಮೀಸಲಾತಿ ಪ್ರಮಾಣ ಪತ್ರಗಳನ್ನು ಅಭ್ಯರ್ಥಿಗಳು ಪಡೆದ ದಿನಾಂಕದಿಂದ ಅರ್ಜಿಗಳನ್ನು ಸಲ್ಲಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕದೊಳಗೆ 05 ವರ್ಷಗಳ ಅವಧಿಯಲ್ಲಿರಬೇಕು. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅಧಿಸೂಚನೆಯ ಕೊನೆಯಲ್ಲಿ ನೀಡಲಾಗಿರುತ್ತದೆ. ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ಅರ್ಜಿಯ ನಿಗದಿತ ಸ್ಥಳದಲ್ಲಿ ತಪ್ಪದೇ ನಮೂದಿಸಬೇಕು ಹಾಗೂ ಸಂದರ್ಶನಕ್ಕೆ ಅರ್ಹರಾಗಿ ಹಾಜರಾದಾಗ ಅದರ ಮೂಲ ಮೀಸಲಾತಿ ಪ್ರಮಾಣ ಪತ್ರವನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು.

**12.2. ಗ್ರಾಮೀಣ ಅಭ್ಯರ್ಥಿ:**

- ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಈ ಪ್ರಮಾಣ ಪತ್ರಗಳು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸತಕ್ಕದ್ದು.
- ಗ್ರಾಮೀಣ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ 2 ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿಟ್ಟು ಕೊಂಡಿರತಕ್ಕದ್ದು.
- ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2ರ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1 ರಲ್ಲಿ ಅವರು ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಶೀಲ್ದಾರ್ ರವರಿಂದ ಪಡೆದಿರತಕ್ಕದ್ದು.
- ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಸಹ ಅನರ್ಹರಾಗುತ್ತಾರೆ.

**ಸೂಚನೆ:** ಗ್ರಾಮೀಣ ಮೀಸಲಾತಿಗೆ ಸಂಬಂಧಿಸಿದಂತೆ ನಮೂನೆ–2ರ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ತಾವು ವ್ಯಾಸಂಗ ಮಾಡಿದ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಅದಕ್ಕೆ ಸಂಬಂಧಿತ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಪಡೆದಿರತಕ್ಕದ್ದು.

**12.3. ಕನ್ನಡ ಮಾಧ್ಯಮ ಅಭ್ಯರ್ಥಿ:**

ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧ ಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿರಬೇಕು.

**12.4. ಅಂಗವಿಕಲ ಅಭ್ಯರ್ಥಿ :**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000, ದಿನಾಂಕ: 03.09.2005 ಮತ್ತು ದಿನಾಂಕ: 01–08–2009ರಲ್ಲಿ ದೃಷ್ಟಿ ಮಾಂದ್ಯ, ಶ್ರವಣ ದೋಷವುಳ್ಳ, ಚಲನವಲನ ವೈಕಲ್ಯ, ಕುಷ್ಠರೋಗದಿಂದ ಗುಣಮುಖರಾದ ಮತ್ತು ಬುದ್ಧಿ ಮಾಂದ್ಯತೆ/ಮಾನಸಿಕ ಅಸ್ವಸ್ಥತೆ (Low vision, Hearing impairment, locomotor disability Leprosy cured, Mental retardation & Mental illness) ವೈಕಲ್ಯತೆಯೆಂದು ಪರಿಗಣಿಸಿದ್ದು, ಶೇ.40ಕ್ಕೆ ಕಡಿಮೆ ಇಲ್ಲದಂತೆ ಬಳಲುತ್ತಿರುವ ವ್ಯಕ್ತಿಗಳು.

ಅಂಗವಿಕಲರಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ: 19.11.2005ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಸಿಆಸುಇ 115 ಸೆನೆನಿ 2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ, ಅಂಗವಿಕಲತೆಯ ಬಗ್ಗೆ ಜಿಲ್ಲಾಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸುವುದಿಲ್ಲ.

12.5 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 74 ಸೆನೆನಿ 2006, ದಿನಾಂಕ: 30–10–2007ರ ಪ್ರಕಾರ ದೃಷ್ಟಿ ಮಾಂದ್ಯ ಅಭ್ಯರ್ಥಿಗಳಿಗೆ ಆಯೋಗವು ವೈದ್ಯಕೀಯ ಮಂಡಳಿಯ ಮುಂದೆ ತಪಾಸಣೆ ನಡೆಸಿ, ವೈದ್ಯಕೀಯ ವರದಿಯ ಆಧಾರದ ಮೇರೆಗೆ ಪರೀಕ್ಷೆಯನ್ನು ಬರೆಯಲು ಲಿಪಿಕಾರರನ್ನು ಮತ್ತು ಪರೀಕ್ಷೆಯಲ್ಲಿ 01 ಗಂಟೆಗೆ 10 ನಿಮಿಷಗಳ ಹೆಚ್ಚುವರಿ ಕಾಲಾವಕಾಶವನ್ನು ನೀಡಲಾಗುವುದು.

ಅ) ವೈದ್ಯಕೀಯ ಪರೀಕ್ಷೆಗೆ ಒಳಪಟ್ಟ ಅಭ್ಯರ್ಥಿಗಳಲ್ಲಿ ಯಾವುದೇ ಅಭ್ಯರ್ಥಿಯು ದೃಷ್ಟಿ ಮಾಂದ್ಯ ಮೀಸಲಾತಿಯಡಿ ಅನರ್ಹರೆಂದು ವೈದ್ಯಕೀಯ ಸಮಿತಿಯು ದೃಢೀಕರಿಸಿದಲ್ಲಿ ಅಂತಹ ಅಭ್ಯರ್ಥಿಗಳ ದೃಷ್ಟಿ ಮಾಂದ್ಯ ಮೀಸಲಾತಿಯನ್ನು ತಿರಸ್ಕರಿಸಲಾಗುವುದು.

ಆ) ಲಿಪಿಕಕಾರರ ಶೈಕ್ಷಣಿಕ ವಿದ್ಯಾರ್ಹತೆಯು ಆಯ್ಕೆಪರೀಕ್ಷೆಗೆ ನಿಗದಿಪಡಿಸಿದ ವಿದ್ಯಾರ್ಹತೆಗಿಂತ ಹೆಚ್ಚಾಗಿರಬಾರದು.

ಇ) ದೃಷ್ಟಿ ಮಾಂದ್ಯ ಅಭ್ಯರ್ಥಿಯು ಸ್ವತಃ ಕರೆತರುವ ಲಿಪಿಕಾರರ ದುರ್ನಡತೆಗೆ ಅಭ್ಯರ್ಥಿಯೇ ಜವಾಬ್ದಾರನಾಗಿರುತ್ತಾರೆ.

ಈ) ಲಿಪಿಕಕಾರರ ಮತ್ತು ಅಭ್ಯರ್ಥಿಯ ನಡುವೆ ನಡೆಯುವ ಸಂವಾದವು ಪರೀಕ್ಷಾ ಕೊಠಡಿಯಲ್ಲಿನ ಶಾಂತಿಗೆ ಭಂಗ ತರಬಾರದು. ಅಥವಾ ಅದೇ ಕೊಠಡಿಯಲ್ಲಿರುವ ಇತರೆ ಅಭ್ಯರ್ಥಿಗಳಿಗೆ ತೊಂದರೆಯುಂಟು ಮಾಡುವಂತಿರಬಾರದು. ಮತ್ತು ವೈದ್ಯಕೀಯ ಪರೀಕ್ಷೆಗೆ ಹಾಜರಾಗುವ ಅಭ್ಯರ್ಥಿಗೆ ಯಾವುದೇ ಪ್ರಯಾಣ ಭತ್ಯೆ/ ದಿನಭತ್ಯೆ ನೀಡಲಾಗುವುದಿಲ್ಲ. ಹಾಗೂ ದೃಷ್ಟಿ ಮಾಂದ್ಯ ಅಭ್ಯರ್ಥಿ ಮತ್ತು ಲಿಪಿಕಾರರು ಅನುಬಂಧ–05ರಲ್ಲಿರುವಂತೆ ದೃಢೀಕರಣ ಪತ್ರ ಸಲ್ಲಿಸಬೇಕು.

ಈ ಅಂಗವಿಕಲ ಮೀಸಲಾತಿಯಡಿ ಆಯ್ಕೆ ಹೊಂದುವ ಅಭ್ಯರ್ಥಿಗಳು ಸಹ ಈ ನ್ಯೂನ್ಯತೆಯನ್ನು ಹೊಂದಿದ್ದರೂ ಸದರಿ ಹುದ್ದೆಯ ಕರ್ತವ್ಯ ನಿರ್ವಹಣೆಗೆ ಅಡ್ಡಿ ಉಂಟಾಗದೆಂದು ತಿಳಿಸುವ ದೈಹಿಕ ಅರ್ಹತೆಯ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ಸೇರುವ ಮುನ್ನ ನೀಡಬೇಕಾಗುತ್ತದೆ.

**12.5 ಯೋಜನಾ ನಿರಾಶ್ರಿತ ಅಭ್ಯರ್ಥಿ :**

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 23 ಸೆನೆನಿ 99, ದಿನಾಂಕ: 23–11–2000ರನ್ವಯ ಯೋಜನೆಗಳಿಂದ ನಿರ್ವಸಿತರಾದ (ಈ ನಿಯಮಗಳು ಜಾರಿಯಾಗುವ 20 ವರ್ಷಕ್ಕೆ ಮುನ್ನ ನಿರ್ವಸತಿತರಾದ ಕುಟುಂಬದ ಅಭ್ಯರ್ಥಿಗಳು ಈ ಮೀಸಲಾತಿಗೆ ಅನ್ವಯವಾಗುವುದಿಲ್ಲ) ಈ ಮೀಸಲಾತಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್ ರವರಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಪಡೆದಿರಬೇಕು.

**ಸೂಚನೆ: 1) ಈ ಮೇಲಿನ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಹಾಗೂ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು.**

**2) ಈ ಮೇಲೆ ನಮೂದಿಸಿರುವ ಎಲ್ಲಾ ಮೀಸಲಾತಿ ಪ್ರಮಾಣ ಪತ್ರಗಳ ನಮೂನೆಗಳನ್ನು ಅಧಿಸೂಚನೆಯ ಕೊನೆಯಲ್ಲಿ ನೀಡಲಾಗಿರುತ್ತದೆ.**

**13. ಅಭ್ಯರ್ಥಿಗಳು ON-LINE ಅರ್ಜಿ ಸಲ್ಲಿಸುವುದರಿಂದ ಯಾವುದೇ ಪ್ರಮಾಣ ಪತ್ರಗಳನ್ನು ಅರ್ಜಿಯೊಂದಿಗೆ ಲಗತ್ತಿಸಲು ಅವಕಾಶ ಇರುವುದಿಲ್ಲ. ಆದರೆ ಈ ಕೆಳಕಂಡ ಪ್ರಮಾಣ ಪತ್ರಗಳನ್ನು/ದಾಖಲಾತಿಗಳನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಅಂದರೆ, ದಿನಾಂಕ: 25–08–2012 ಮತ್ತು 07–12–2012ರ ಒಳಗೆ ಪಡೆದಿರಬೇಕು ಇಲ್ಲವೇ ಸಿಂಧುವಾಗಿರಬೇಕು, ಹಾಗೂ ಆಯೋಗವು ಪರಿಶೀಲನೆಗಾಗಿ ಹಾಜರುಪಡಿಸಲು ಸೂಚಿಸಿದಾಗ ಅರ್ಜಿಯಲ್ಲಿ ನಮೂದಿಸಿರುವ ಮೀಸಲಾತಿಯ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಕೆಳಕಂಡಂತೆ ಕ್ರಮ ಕೈಗೊಳ್ಳಲಾಗುವುದು.**

**1) ಕಡ್ಡಾಯವಾಗಿ ಹಾಜರು ಪಡಿಸಬೇಕಾದ ವಿದ್ಯಾರ್ಹತೆ/ ಜನ್ಮ ದಿನಾಂಕ ಪ್ರಮಾಣ ಪತ್ರಗಳನ್ನು ಹಾಜರು ಪಡಿಸದಿದ್ದಲ್ಲಿ : ಅಭ್ಯರ್ಥಿಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.**

**2) ವಿವಿಧ ಮೀಸಲಾತಿ ಕೋರಿ ಹಾಜರು ಪಡಿಸಬೇಕಾದ ಪ್ರಮಾಣ ಪತ್ರಗಳನ್ನು ಹಾಜರು ಪಡಿಸದಿದ್ದಲ್ಲಿ: ಆ ಮೀಸಲಾತಿಯನ್ನು ರದ್ದು ಪಡಿಸಿ ಸಾಮಾನ್ಯ ಅರ್ಹತೆಯಲ್ಲಿ ಅರ್ಹತೆಯನ್ನು ಹೊಂದಿದ್ದಲ್ಲಿ ಮಾತ್ರ, ಸಾಮಾನ್ಯ ಅರ್ಹತೆಯ ಅಭ್ಯರ್ಥಿಯೆಂದು ಪರಿಗಣಿಸಲಾಗುವುದು.**

**13.1 ಕಡ್ಡಾಯವಾಗಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು :**

1. ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಾದ ಪಿ.ಯು.ಸಿ. ಅಥವಾ 10+2 ವಿದ್ಯಾರ್ಹತೆಯ ಅಂಕಪಟ್ಟಿಗಳು.
2. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆಯ ಪ್ರಮಾಣ ಪತ್ರ (ಟಿ.ಸಿ)/ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತಭಾಗ (Extract of Cumulative Record)

3. ವಿವಿಧ ಮೀಸಲಾತಿಗಳನ್ನು ಕೋರಿದ್ದಲ್ಲಿ, ಮೀಸಲಾತಿ ಪ್ರಮಾಣ ಪತ್ರಗಳು.

**13.2 ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದ್ದಲ್ಲಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು :**

1. ಸೈನಿಕ ಸೇವೆಯಿಂದ ಬಿಡುಗಡೆಯಾದ/ಮುಕ್ತಿಹೊಂದಿದ ಬಗೆಗಿನ ಪ್ರಮಾಣ ಪತ್ರ

   **ಟಿಪ್ಪಣಿ:** ಮಾಜಿ ಸೈನಿಕ ಅವಲಂಬಿತರ ಈ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಯಮಾನುಸಾರ ಅ ಮೀಸಲಾತಿಗೆ ಅರ್ಹರೆ? ಎಂಬುದನ್ನು ಹತ್ತಿರದ ಜಿಲ್ಲಾ ಸೈನಿಕ ಬೋರ್ಡ್‌ನಿಂದ ತಿಳಿದುಕೊಂಡು ಮೀಸಲಾತಿಯನ್ನು ಕೋರುವುದು ಸೂಕ್ತ.

2. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ ಡಿ/ಇ/ಎಫ್ ನಲ್ಲಿ ತಹಶೀಲ್ದಾರ್‌ರವರಿಂದ ಪಡೆದಿರುವ ಪ್ರಮಾಣ ಪತ್ರ.

3. ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ಅಂಕಣವನ್ನು (Circle) ತುಂಬತಕ್ಕದ್ದು ಹಾಗೂ ಅವರ ಸೇವಾ ಪ್ರಮಾಣ ಪತ್ರ ಮತ್ತು ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ನಿರಪೇಕ್ಷಣಾ ಪ್ರಮಾಣ ಪತ್ರವನ್ನು ('No Objection' Certificate) ಸಂಬಂಧಿತ ನೇಮಕಾತಿ ಪ್ರಾಧಿಕಾರದಿಂದ ದಿನಾಂಕ: 25–08–2012 ಮತ್ತು 07–12–2012ರ ಒಳಗೆ ಪಡೆದಿಟ್ಟುಕೊಂಡಿರಬೇಕು ಮತ್ತು ಆಯೋಗವು ಸೂಚಿಸಿದಾಗ ಹಾಜರುಪಡಿಸತಕ್ಕದ್ದು.

4. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ

5. ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ

6. ಅಂಗವಿಕಲ ಅಭ್ಯರ್ಥಿಗಳು ನಿಗದಿಪಡಿಸಿದ ನಮೂನೆಯಲ್ಲಿ ಪಡೆದ ವೈದ್ಯಕೀಯ ಪ್ರಮಾಣ ಪತ್ರ.

7. ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ವಿಧವೆಯರು, ಜೀತ ಕಾರ್ಮಿಕರು, ಗ್ರಾಮ ಸಮೂಹ ಪರಿಶೀಲಕರು ಮತ್ತು ಕ್ಯಾಡೆಟ್ ಪರಿವೀಕ್ಷಕರು ಇವರುಗಳು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣಪತ್ರ.

ಈ ಮೇಲಿನ ವಿದ್ಯಾರ್ಹತೆ, ಮೀಸಲಾತಿ ಮತ್ತು ವಯೋಮಿತಿ ಇನ್ನಿತರ ಅಂಶಗಳನ್ನು ಆಯೋಗವು ಕೂಲಂಕಷವಾಗಿ ಪರಿಶೀಲಿಸಿದ ನಂತರವೇ ಅಭ್ಯರ್ಥಿಗಳನ್ನು ಜೇಷ್ಠತೆ ಮತ್ತು ಮೀಸಲಾತಿ ಆಧಾರದ ಮೇಲೆ ಮುಂದಿನ ಆಯ್ಕೆ ಪ್ರಕ್ರಿಯೆಗೆ ಪರಿಗಣಿಸಲಾಗುವುದು.

**14. ಪ್ರಮುಖ ಸೂಚನೆಗಳು:**

1. ಅಭ್ಯರ್ಥಿಗಳು ON-LINE ಅರ್ಜಿಗಳಲ್ಲಿ ನೀಡುವ ಮಾಹಿತಿಗಳ ಆಧಾರದ ಮೇಲೆ ಅವರುಗಳು ಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆಯಲು ಅರ್ಹರೆ ಎಂಬುದನ್ನು ಆಯೋಗವು ಪರಿಶೀಲಿಸಿ ಮೇಲು ನೋಟಕ್ಕೆ ಅರ್ಹರೆಂದು ಕಂಡುಬಂದ ಅಭ್ಯರ್ಥಿಗಳಿಗೆ ಮಾತ್ರ ಪ್ರವೇಶ ಪತ್ರಗಳನ್ನು ಡೌನ್‌ಲೋಡ್ ಮಾಡಿಕೊಳ್ಳಲು ಅವಕಾಶ ನೀಡುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ.

2. ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ, ಪರೀಕ್ಷಾ ಕೇಂದ್ರ ಹಾಗೂ ವಯೋಮಿತಿ ಸಡಿಲಿಕೆ, ಇತ್ಯಾದಿ ವಿವರಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು ಹಾಗೂ ಈ ಬಗ್ಗೆ ಆನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಕೋರಿಕೆ ಪತ್ರಗಳನ್ನು ಪುರಸ್ಕರಿಸಲಾಗುವುದಿಲ್ಲ.

3. **ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ವಿಳಾಸ ಬದಲಾವಣೆಯಾಗಿದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ಆಯೋಗದ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಆಯೋಗವು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಆಯೋಗವು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರವಹಿಸತಕ್ಕದ್ದು.**

**15. ಅರ್ಜಿಯಲ್ಲಿ ಮೀಸಲಾತಿಗೆ ಸಂಬಂಧಿಸಿದ ಅಂಕಣದಲ್ಲಿ ಉಪಯೋಗಿಸಿದ ಪದಗಳ ಅರ್ಥವನ್ನು ಈ ಕೆಳಕಂಡಂತೆ ಅರ್ಥೈಸಿಕೊಳ್ಳಬೇಕು:–**

| | | | |
|---|---|---|---|
| ಸಾ.ಅ | ಸಾಮಾನ್ಯ ಅರ್ಹತೆ | GM | General Merit |
| ಪ.ಜಾ | ಪರಿಶಿಷ್ಟ ಜಾತಿ | SC | Scheduled Caste |
| ಪ.ಪಂ | ಪರಿಶಿಷ್ಟ ಪಂಗಡ | ST | Scheduled Tribe |
| ಪ್ರ–1 | ಪ್ರವರ್ಗ–1 | Cat – 1 | Category – I |
| 2ಎ | ಪ್ರವರ್ಗ–2ಎ | 2A | Category – 2A |

| | | | |
|---|---|---|---|
| 2ಬಿ | ಪ್ರವರ್ಗ–2ಬಿ | 2B | Category – 2B |
| 3ಎ | ಪ್ರವರ್ಗ–3ಎ | 3A | Category – 3A |
| 3ಬಿ | ಪ್ರವರ್ಗ–3ಬಿ | 3B | Category – 3B |
| ಮಾ.ಸೈ | ಮಾಜಿ ಸೈನಿಕ | Ex-MP | Ex-Military Person |
| ಗ್ರಾಮೀಣ | ಗ್ರಾಮೀಣ ಅಭ್ಯರ್ಥಿ | Rural | Rural Candidate |
| ಕ.ಮಾ.ಅ | ಕನ್ನಡ ಮಾಧ್ಯಮ ಅಭ್ಯರ್ಥಿ | KMS | Kannada Medium Student |
| ಯೋ.ಅ | ಯೋಜನಾ ನಿರಾಶ್ರಿತ ಅಭ್ಯರ್ಥಿ | PDP | Project Displaced Person |
| ಅಂ.ವಿ. | ಅಂಗವಿಕಲ | PH | Physically Handicapped Person |

**16. ಪ್ರವೇಶ ಪತ್ರ:**

**ಆಯೋಗವು ಅಭ್ಯರ್ಥಿಗಳಿಗೆ ಪ್ರವೇಶ ಪತ್ರಗಳನ್ನು ಕಳುಹಿಸುವುದಿಲ್ಲ. ಅಭ್ಯರ್ಥಿಗಳು ಸ್ವತಃ ಆಯೋಗದ ವೆಬ್‌ಸೈಟಿನಿಂದ ಪ್ರವೇಶ ಪತ್ರಗಳನ್ನು DownLoad ಮಾಡಿಕೊಂಡು ಪರೀಕ್ಷೆಗೆ ಹಾಜರಾಗತಕ್ಕದ್ದು. ಪ್ರವೇಶ ಪತ್ರಗಳನ್ನು DownLoad ಮಾಡಿಕೊಳ್ಳುವ ಅಂಶವನ್ನು ಪರೀಕ್ಷಾ ದಿನಾಂಕಕ್ಕೆ 15 ದಿನಗಳ ಮುಂಚಿತವಾಗಿ ಪ್ರಕಟಿಸಲಾಗುವುದು.**

**17. ಆಯೋಗದೊಡನೆ ಪತ್ರ ವ್ಯವಹಾರ:**

ಆಯೋಗವು ಅಭ್ಯರ್ಥಿತ್ವದ ವಿಚಾರದಲ್ಲಿ ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ. ಆದಾಗ್ಯೂ ಪರೀಕ್ಷೆಗಾಗಿ ಪ್ರವೇಶ ಪತ್ರವನ್ನು ಡೌನ್‌ಲೋಡ್ ಮಾಡಿಕೊಳ್ಳುವಲ್ಲಿ ಸಮಸ್ಯೆ ಉಂಟಾದಲ್ಲಿ, ಸಹಾಯವಾಣಿ (HELP LINE) ಸಂಪರ್ಕಿಸತಕ್ಕದ್ದು. ಅಭ್ಯರ್ಥಿಯು ಮಾಹಿತಿಗಾಗಿ ಸಂಪರ್ಕಿಸುವ ಸಮಯದಲ್ಲಿ ಈ ಹುದ್ದೆಗಳಿಗೆ ಸಲ್ಲಿಸಿದ ಅರ್ಜಿಯ ಕ್ರಮಸಂಖ್ಯೆ, ಜನ್ಮ ದಿನಾಂಕ, ಕೋರಿದ ಪರೀಕ್ಷಾ ಕೇಂದ್ರ ಇತ್ಯಾದಿ ವಿವರಗಳನ್ನು ನೀಡತಕ್ಕದ್ದು.

**18. ಹೆಚ್ಚಿನ ಮಾಹಿತಿಗಾಗಿ ದೂರವಾಣಿ ಸಂಖ್ಯೆಗಳು:**

| | | |
|---|---|---|
| **ಕೇಂದ್ರ ಕಛೇರಿಯ ಮಾಹಿತಿ ಕೇಂದ್ರ** | : | **080–30574901** |
| | : | **080–30574957** |
| **ಪ್ರಾಂತೀಯ ಕಛೇರಿ ಮೈಸೂರು** | : | **0821–2545956** |
| **ಪ್ರಾಂತೀಯ ಕಛೇರಿ ಬೆಳಗಾವಿ** | : | **0831–2475345** |
| **ಪ್ರಾಂತೀಯ ಕಛೇರಿ ಗುಲ್ಬರ್ಗಾ** | : | **08472–227944** |
| **ಪ್ರಾಂತೀಯ ಕಛೇರಿ ಶಿವಮೊಗ್ಗ** | : | **08182–228099** |
| **ಸಹಾಯವಾಣಿ (Help Line)** | : | **9740977411** |
| | : | **9741966115** |

**19. ದುರ್ನಡತೆ :**

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಹೊಂದಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆ ಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ಆಯೋಗದಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ಆಯೋಗವು ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

**ಕೆ.ಆರ್. ಸುಂದರ್**

ಕಾರ್ಯದರ್ಶಿ,

ಕರ್ನಾಟಕ ಲೋಕಸೇವಾ ಆಯೋಗ. ಬೆಂಗಳೂರು

## ಅನುಬಂಧ – 1

## ಹುದ್ದೆಗಳ ವರ್ಗೀಕರಣ

### ಬೆಂಗಳೂರು ನಗರ ಜಿಲ್ಲೆ ಹುದ್ದೆಗಳ ಸಂಖ್ಯೆ : 34

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಅಂಗವಿಕಲ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|---|
| ಪ.ಜಾ | 1 | 2 | 2 | *1 | – | – | – | 6 |
| ಪ.ಪಂ. | 1 | – | – | – | – | – | – | 1 |
| ಪ್ರ–1 | 1 | 1 | – | – | – | – | – | 2 |
| ಪ್ರ–2(ಎ) | 1 | 2 | 1 | *1 | – | – | – | 5 |
| ಪ್ರ–2(ಬಿ) | 1 | – | – | – | – | – | – | 1 |
| ಪ್ರ–3(ಎ) | 1 | – | – | – | – | – | – | 1 |
| ಪ್ರ–3(ಬಿ) | 1 | – | – | – | – | – | – | 1 |
| ಸಾ.ಅ. | 3 | 5 | 5 | *1 | 1 | 1 | 1 | 17 |
| **ಒಟ್ಟು** | **10** | **10** | **8** | **3** | **1** | **1** | **1** | **34** |

* ದೃಷ್ಟಿಮಾಂದ್ಯತೆಯುಳ್ಳವರಿಗೆ ಮೀಸಲಿರಿಸಿದೆ.

### ಬೆಂಗಳೂರು ಗ್ರಾಮಾಂತರ ಜಿಲ್ಲೆ ಹುದ್ದೆಗಳ ಸಂಖ್ಯೆ : 36

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಅಂಗವಿಕಲ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|---|
| ಪ.ಜಾ | 1 | 2 | 2 | *1 | – | – | – | 6 |
| ಪ.ಪಂ. | 1 | – | – | – | – | – | – | 1 |
| ಪ್ರ–1 | 1 | 1 | – | – | – | – | – | 2 |
| ಪ್ರ–2(ಎ) | 1 | 2 | 1 | *1 | – | – | – | 5 |
| ಪ್ರ–2(ಬಿ) | 1 | 1 | – | – | – | – | – | 2 |
| ಪ್ರ–3(ಎ) | 1 | – | – | – | – | – | – | 1 |
| ಪ್ರ–3(ಬಿ) | 1 | – | – | – | – | – | – | 1 |
| ಸಾ.ಅ. | 3 | 6 | 5 | *1 | 1 | 1 | 1 | 18 |
| **ಒಟ್ಟು** | **10** | **12** | **8** | **3** | **1** | **1** | **1** | **36** |

* ದೃಷ್ಟಿಮಾಂದ್ಯತೆಯುಳ್ಳವರಿಗೆ ಮೀಸಲಿರಿಸಿದೆ.

### ಬಾಗಲಕೋಟೆ ಜಿಲ್ಲೆಹುದ್ದೆಗಳ ಸಂಖ್ಯೆ : 49

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಅಂಗವಿಕಲ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|---|
| ಪ.ಜಾ | 2 | 3 | 2 | *1 | – | – | – | 8 |
| ಪ.ಪಂ. | 1 | 1 | – | – | – | – | – | 2 |
| ಪ್ರ–1 | 1 | 1 | – | – | – | – | – | 2 |
| ಪ್ರ–2(ಎ) | 2 | 2 | 2 | *1 | – | – | – | 7 |
| ಪ್ರ–2(ಬಿ) | 1 | 1 | – | – | – | – | – | 2 |
| ಪ್ರ–3(ಎ) | 1 | 1 | – | – | – | – | – | 2 |

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಅಂಗವಿಕಲ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|---|
| ಪ್ರ–3(ಬಿ) | 1 | 1 | – | – | – | – | – | 2 |
| ಸಾ.ಅ. | 5 | 7 | 6 | *2 | 2 | 1 | 1 | 24 |
| **ಒಟ್ಟು** | **14** | **17** | **10** | **4** | **2** | **1** | **1** | **49** |

* ದೃಷ್ಟಿಮಾಂದ್ಯತೆಯುಳ್ಳವರಿಗೆ ಮೀಸಲಿರಿಸಿದೆ.

**ಬೆಳಗಾಂ ಜಿಲ್ಲೆ ಹುದ್ದೆಗಳ ಸಂಖ್ಯೆ : 145**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಅಂಗವಿಕಲ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|---|
| ಪ.ಜಾ | 5 | 7 | 5 | *1 | 2 | 1 | 1 | 22 |
| ಪ.ಪಂ. | 1 | 2 | 1 | *1 | – | – | – | 5 |
| ಪ್ರ–1 | 1 | 2 | 2 | *1 | – | – | – | 6 |
| ಪ್ರ–2(ಎ) | 5 | 7 | 5 | *1 | 2 | 1 | 1 | 22 |
| ಪ್ರ–2(ಬಿ) | 1 | 2 | 2 | *1 | – | – | – | 6 |
| ಪ್ರ–3(ಎ) | 1 | 2 | 1 | *1 | – | – | – | 5 |
| ಪ್ರ–3(ಬಿ) | 2 | 2 | 2 | *1 | – | – | – | 7 |
| ಸಾ.ಅ. | 15 | 22 | 18 | *2, **1, ***1 | 7 | 3 | 3 | 72 |
| **ಒಟ್ಟು** | **31** | **46** | **36** | **11** | **11** | **5** | **5** | **145** |

* ದೃಷ್ಟಿಮಾಂದ್ಯತೆಯುಳ್ಳವರಿಗೆ, ** ಶ್ರವಣ ದೋಷವುಳ್ಳವರಿಗೆ ಮತ್ತು *** ಚಲನವಲನ ವೈಕಲ್ಯ ಇರುವವರಿಗೆ ಮೀಸಲಿರಿಸಿದೆ.

**ಬಳ್ಳಾರಿ ಜಿಲ್ಲೆ ಹುದ್ದೆಗಳ ಸಂಖ್ಯೆ : 56**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಅಂಗವಿಕಲ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|---|
| ಪ.ಜಾ | 2 | 3 | 3 | *1 | – | – | – | 9 |
| ಪ.ಪಂ. | 1 | 1 | – | – | – | – | – | 2 |
| ಪ್ರ–1 | 1 | 1 | – | – | – | – | – | 2 |
| ಪ್ರ–2(ಎ) | 2 | 3 | 3 | *1 | – | – | – | 9 |
| ಪ್ರ–2(ಬಿ) | 1 | 1 | – | – | – | – | – | 2 |
| ಪ್ರ–3(ಎ) | 1 | 1 | – | – | – | – | – | 2 |
| ಪ್ರ–3(ಬಿ) | 1 | 1 | – | – | – | – | – | 2 |
| ಸಾ.ಅ. | 6 | 9 | 7 | *2 | 2 | 1 | 1 | 28 |
| **ಒಟ್ಟು** | **15** | **20** | **13** | **4** | **2** | **1** | **1** | **56** |

* ದೃಷ್ಟಿಮಾಂದ್ಯತೆಯುಳ್ಳವರಿಗೆ ಮೀಸಲಿರಿಸಿದೆ.

**ಬೀದರ್ ಜಿಲ್ಲೆ ಹುದ್ದೆಗಳ ಸಂಖ್ಯೆ : 48**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಅಂಗವಿಕಲ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|---|
| ಪ.ಜಾ | 2 | 2 | 2 | *1 | – | – | – | 7 |
| ಪ.ಪಂ. | 1 | 1 | – | – | – | – | – | 2 |

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಅಂಗವಿಕಲ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|---|
| ಪ್ರ–1 | 1 | 1 | – | – | – | – | – | 2 |
| ಪ್ರ–2(ಎ) | 2 | 2 | 2 | *1 | – | – | – | 7 |
| ಪ್ರ–2(ಬಿ) | 1 | 1 | – | – | – | – | – | 2 |
| ಪ್ರ–3(ಎ) | 1 | 1 | – | – | – | – | – | 2 |
| ಪ್ರ–3(ಬಿ) | 1 | 1 | – | – | – | – | – | 2 |
| ಸಾ.ಅ. | 5 | 7 | 6 | *2 | 2 | 1 | 1 | 24 |
| **ಒಟ್ಟು** | **14** | **16** | **10** | **4** | **2** | **1** | **1** | **48** |

* ದೃಷ್ಟಿಮಾಂದ್ಯತೆಯುಳ್ಳವರಿಗೆ ಮೀಸಲಿರಿಸಿದೆ.

**ಬಿಜಾಪುರ ಜಿಲ್ಲೆ ಹುದ್ದೆಗಳ ಸಂಖ್ಯೆ : 71**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಅಂಗವಿಕಲ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|---|
| ಪ.ಜಾ | 3 | 3 | 3 | *1 | 1 | – | – | 11 |
| ಪ.ಪಂ. | 1 | 1 | 1 | – | – | – | – | 3 |
| ಪ್ರ–1 | 1 | 1 | 1 | – | – | – | – | 3 |
| ಪ್ರ–2(ಎ) | 3 | 3 | 3 | *1 | 1 | – | – | 11 |
| ಪ್ರ–2(ಬಿ) | 1 | 1 | 1 | – | – | – | – | 3 |
| ಪ್ರ–3(ಎ) | 1 | 1 | – | – | – | – | – | 2 |
| ಪ್ರ–3(ಬಿ) | 1 | 1 | 1 | – | – | – | – | 3 |
| ಸಾ.ಅ. | 7 | 11 | 9 | *2 | 3 | 2 | 1 | 35 |
| **ಒಟ್ಟು** | **18** | **22** | **19** | **4** | **5** | **2** | **1** | **71** |

* ದೃಷ್ಟಿಮಾಂದ್ಯತೆಯುಳ್ಳವರಿಗೆ ಮೀಸಲಿರಿಸಿದೆ.

**ಚಿಕ್ಕಮಗಳೂರು ಜಿಲ್ಲೆ ಹುದ್ದೆಗಳ ಸಂಖ್ಯೆ : 63**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಅಂಗವಿಕಲ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|---|
| ಪ.ಜಾ | 2 | 3 | 3 | *1 | 1 | – | – | 10 |
| ಪ.ಪಂ. | 1 | 1 | – | – | – | – | – | 2 |
| ಪ್ರ–1 | 1 | 1 | 1 | – | – | – | – | 3 |
| ಪ್ರ–2(ಎ) | 2 | 3 | 3 | *1 | 1 | – | – | 10 |
| ಪ್ರ–2(ಬಿ) | 1 | 1 | 1 | – | – | – | – | 3 |
| ಪ್ರ–3(ಎ) | 1 | 1 | – | – | – | – | – | 2 |
| ಪ್ರ–3(ಬಿ) | 1 | 1 | – | – | – | – | – | 2 |
| ಸಾ.ಅ. | 7 | 9 | 8 | *2 | 3 | 1 | 1 | 31 |
| **ಒಟ್ಟು** | **16** | **20** | **16** | **4** | **5** | **1** | **1** | **63** |

* ದೃಷ್ಟಿಮಾಂದ್ಯವುಳ್ಳವರಿಗೆ ಮೀಸಲಿರಿಸಿದೆ.

## ಅನುಬಂಧ–5

**ಅಂಧ/ದೃಷ್ಟಿಮಾಂಧ್ಯ ಅಭ್ಯರ್ಥಿಯ ಲಿಪಿಕಾರನ (Scribe) ವಿವರಗಳು:–**

**ಲಿಪಿಕಾರನ (Scribe) ಭಾವಚಿತ್ರ**

**(ಲಿಪಿಕಾರನ (Scribe)ಇತ್ತೀಚೆಗಿನ ಭಾವಚಿತ್ರ ಲಗತ್ತಿಸುವುದು)**

1. ಅಂಧ/ದೃಷ್ಟಿಮಾಂಧ್ಯ ಅಭ್ಯರ್ಥಿಯ ಹೆಸರು :
2. ಪರೀಕ್ಷಾ ಕೇಂದ್ರ :
3. ಉಪ ಪರೀಕ್ಷಾ ಕೇಂದ್ರ :
4. ಲಿಪಿಕಾರನ ಹೆಸರು :
5. ಲಿಪಿಕಾರನ ವಿಳಾಸ

   ಅ) ಖಾಯಂ ವಿಳಾಸ :

   ಆ) ಅಂಚೆ/ ಕಛೇರಿ ವಿಳಾಸ :
6. ಲಿಪಿಕಾರನ ವಿದ್ಯಾರ್ಹತೆ :
7. ಅಂಧ/ದೃಷ್ಟಿಮಾಂಧ್ಯ ಅಭ್ಯರ್ಥಿಗೆ ಲಿಪಿಕಾರನ ಸಂಬಂಧ ಇತ್ಯಾದಿ :

## ಘೋಷಣಾ ಪತ್ರ

ಈ ಮೇಲೆ ಒದಗಿಸಲಾದ ಮಾಹಿತಿಗಳು ನಮಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಪ್ರಮಾಣೀಕರಿಸಿ ಘೋಷಿಸುತ್ತೇವೆ. ಲಿಪಿಕಾರ ಹಾಗೂ ಅಂಧ/ದೃಷ್ಟಿಮಾಂಧ್ಯ ಅಭ್ಯರ್ಥಿ ನಾವೀರ್ವರೂ ಸದರಿ ಸ್ಪರ್ಧಾತ್ಮಕ ಪರೀಕ್ಷೆಯ ಸಂಬಂಧವಾಗಿ ನೀಡಿರುವ ಸೂಚನೆಗಳನ್ನು ಓದಿ/ಕೇಳಿ ತಿಳಿದುಕೊಂಡಿರುತ್ತೇವೆ ಮತ್ತು ಸದರಿ ಸೂಚನೆಗಳಿಗೆ ಬದ್ಧವಾಗಿರುತ್ತೇವೆ.

(ಅಂಧ/ದೃಷ್ಟಿಮಾಂಧ್ಯ ಅಭ್ಯರ್ಥಿ ಸಹಿ) (ಲಿಪಿಕಾರನ ಸಹಿ)

ಸ್ಥಳ:
ದಿನಾಂಕ:

**ಆಯುಕ್ತರವರ ಕಾರ್ಯಾಲಯ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, 2ನೇ ಮಹಡಿ**

**ಸರ್.ಎಂ. ವಿಶ್ವೇಶ್ವರಾಯ ಚಿಕ್ಕ ಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ವೀದಿ, ಬೆಂಗಳೂರು – 560 001**

**ಪ್ರಕಟಣೆ ಸಂಖ್ಯೆ ಆಪಸಂ/ಸಿಬ್ಬಂದಿ–2/ವಿವ–38/2012–13 ಬೆಂಗಳೂರು ದಿನಾಂಕ: 03.12.2012**

**ಭರ್ತಿಮಾಡಿದ ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಲಾದ ಕೊನೆಯ ದಿನಾಂಕ: 03.01.2013**

**ಅಧಿಸೂಚನೆ**

ವಿಷಯ: **391** ಪಶುವೈದ್ಯಾಧಿಕಾರಿಗಳ ಹುದ್ದೆಯನ್ನು ತುಂಬಲು ಅರ್ಜಿಗಳನ್ನು ಆಹ್ವಾನಿಸಿರುವುದು

ಸರ್ಕಾರದ ಅಧಿಸೂಚನೆ ಸಂಖ್ಯೆ ಪಸಂಮೀ/94/ಪಸಸೇ/2009 ದಿನಾಂಕ: 22.11.2012 ನಿಯಮಾವಳಿಯನ್ವಯ 391 ಖಾಲಿ ಪಶುವೈದ್ಯಾಧಿಕಾರಿಗಳ **ಬಿ** ಗುಂಪಿನ ಹುದ್ದೆಗಳನ್ನು (ವೇತನ ಶ್ರೇಣಿ. 26000–47700) ಕರ್ನಾಟಕ ಪಶುಸಂಗೋಪನೆ ಮತ್ತು ಪಶುವೈದ್ಯ ಸೇವೆ (ಪಶುವೈದ್ಯಾಧಿಕಾರಿಗಳ ನೇರ ನೇಮಕಾತಿ) (ವಿಶೇಷ ನೇಮಕಾತಿ) ನಿಯಮಗಳು 2012 ರನ್ವಯ ಆಯ್ಕೆಗಾಗಿ ಪರಿಗಣಿಸಲು ಅರ್ಹ ಅಭ್ಯರ್ಥಿಗಳಿಂದ ನಿಗಧಿತ ನಮೂನೆಯಲ್ಲಿ ದ್ವಿಪ್ರತಿಗಳಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿಯನ್ನು ಈ ಪ್ರಕಟಣೆಯಲ್ಲಿ ಕಾಣಿಸಿರುವ ನಮೂನೆಯಲ್ಲಿ ಬೆರಳಚ್ಚು ಮಾಡಿದ/ಗಣಕೀಕೃತ ಅರ್ಜಿಗಳನ್ನು ಸ್ವೀಕರಿಸಲಾಗುವುದು. ಕೈಬರಹದ/ಜೆರಾಕ್ಸ್/ಮುದ್ರಿತ ಅಥವಾ ಇತರೆ ಯಾವುದೇ ಆಯ್ಕೆ ಪ್ರಾಧಿಕಾರದ / ಆಯೋಗದ ಅರ್ಜಿಗಳನ್ನು ಒಪ್ಪಲಾಗುವುದಿಲ್ಲ.

1. ಆಯ್ಕೆಯನ್ನು ಬಿ.ವಿ.ಎಸ್‌ಸಿ./ಬಿ.ವಿ.ಎಸ್‌ಸಿ ಅಂಡ್ ಎಹೆಚ್ ಪದವಿಯಲ್ಲಿ ಎಲ್ಲಾ ವರ್ಷಗಳಲ್ಲಿ ಗಳಿಸಿದ ಒಟ್ಟು ಶೇಕಡಾವಾರು ಅಂಕಗಳ ಅರ್ಹತೆ ಆಧಾರದ ಮೇಲೆ ಹಾಗೂ ಮೀಸಲಾತಿಗನುಗುಣವಾಗಿ ನಡೆಸಲಾಗುವುದು.

2. **ನಿಗಧಿಪಡಿಸಿದ ವಿದ್ಯಾರ್ಹತೆ:** ಅರ್ಜಿ ಸಲ್ಲಿಸಲು ನಿಗಧಿಪಡಿಸಲಾದ ಅಂತಿಮ ದಿನಾಂಕದಂದು ಅಭ್ಯರ್ಥಿಯು ಭಾರತದಲ್ಲಿ ಕಾನೂನು ರೀತ್ಯ ಸ್ಥಾಪಿಸಲಾದ ಯಾವುದೇ ಪಶುವೈದ್ಯಕೀಯ ವಿಜ್ಞಾನ ವಿಶ್ವವಿದ್ಯಾಲಯ ಅಥವಾ ಕೃಷಿ ವಿಶ್ವವಿದ್ಯಾಲಯದಿಂದ ಬಿ.ವಿ.ಎಸ್‌ಸಿ./ಬಿ.ವಿ.ಎಸ್‌ಸಿ. ಅಂಡ್ ಎಹೆಚ್ ಪದವಿಯನ್ನು ಪಡೆದಿರಬೇಕು ಹಾಗೂ ಕರ್ನಾಟಕ ಪಶುವೈದ್ಯಕೀಯ ಪರಿಷತ್ತಿನ ಕಾಯ್ದೆ 1984ರ ಅಡಿಯಲ್ಲಿ ನೋಂದಣಿಯಾಗಿರಬೇಕು. (ದಾಖಲೆಗಳ ಪರಿಶೀಲಿಸಿ ಸಮಯದಲ್ಲಿ ಕೆ.ವಿ.ಸಿ. ಪ್ರಮಾಣ ಪತ್ರ ಒದಗಿಸಬೇಕು).

3. **ವಯೋಮಿತಿ:** ಅಭ್ಯರ್ಥಿಗಳಿಂದ ಪೂರ್ಣಗೊಳಿಸಿದ ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಅಂತಿಮ ದಿನಾಂಕದಂದು ನಿಗಧಿಪಡಿಸಿದ ಕನಿಷ್ಠ ವಯೋಮಿತಿಯಲ್ಲಿರಬೇಕು ಹಾಗೂ ನಿಗದಿತ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು. ವಯೋಮಿತಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ. ಡಿಪಿಎಆರ್/42/ಎಸ್‌ಆರ್‌ಆರ್/2008 ದಿನಾಂಕ: 18.12.2008 ರ ಮೇರೆಗೆ ನಿಗಧಿಪಡಿಸಲಾಗಿದೆ.

| | |
|---|---|
| ಕನಿಷ್ಠ | 18 ವರ್ಷಗಳು |
| ಗರಿಷ್ಠ | 35 ವರ್ಷಗಳು |
| ಪ್ರವರ್ಗ IIಎ, IIಬಿ<br>ಪ್ರವರ್ಗ IIIಎ, IIIಬಿ | 38 ವರ್ಷಗಳು |
| ಪಜಾ, ಪಪಂ. ಪ್ರವರ್ಗ–I | 40 ವರ್ಷಗಳು |

3.1 ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರ ಕೇಂದ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳಷ್ಟು ಗರಿಷ್ಠ ವಯೋಮಿತಿಗೆ ವಿನಾಯಿತಿ ನೀಡಿದೆ.

**ವಿವರಣೆ:–** ಮಾಜಿ ಸೈನಿಕ ಎಂದರೆ ಕೇಂದ್ರ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಂತೆಯಾಗಲಿ) ಸೇವೆ ಸಲ್ಲಿಸಿದ ವ್ಯಕ್ತಿ. ಆದರೆ ಡಿಫೆನ್ಸ್ ಸೆಕ್ಯೂರಿಟಿ ಕಾರ್ಪ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ; ಮತ್ತು

(ಎ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ;

**ಅಥವಾ**

(ಬಿ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ದೋಷ ಪೂರಿತನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ದಾಟಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಿಂದ ಬಿಡುಗಡೆಯಾದವನು; ಅಥವಾ

(ಸಿ) ಸ್ವಂತ ಕೋರಿಕೆ ಮೇರೆಗೆ ಅಲ್ಲದೆ ಸಂಸ್ಥೆಯ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ; ಅಥವಾ

(ಡಿ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ವರ್ತನೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯ ಪರಿಗಣಿಸಿದ ಮತ್ತು ಅವರಿಗೆ ಗ್ರಾಚುಯಿಟಿ ನೀಡಿರುವ ವ್ಯಕ್ತಿಯಲ್ಲದ ನಿರ್ಧಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಪ್ರಾಂತ್ಯದ ಸೇನೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು ಸೇರ್ಪಡೆಯಾಗುತ್ತಾರೆ.

(i) ನಿರಂತರ ಸೇವೆ ಸಲ್ಲಿಸಿ ನಿವೃತ್ತಿಹೊಂದಿದ ಪಿಂಚಣಿದಾರರು

(ii) ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಮರ್ಥತೆ ಹೊಂದಿ ಬಿಡುಗಡೆಯಾದ ವ್ಯಕ್ತಿ

(iii) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು

**ವಿವರಣೆ:–** ಕೇಂದ್ರ, ಸಶಸ್ತ್ರ ದಳದಲ್ಲಿ ಸೇವೆಯಲ್ಲಿರುವ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ "ಮಾಜಿ ಸೈನಿಕ" ನೆಂಬ ವರ್ಗದಡಿ ಬರುವ ವ್ಯಕ್ತಿಗೆ ನಿರ್ಧಿಷ್ಟ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

**3.2** ಅಭ್ಯರ್ಥಿಯು ನ್ಯಾಷನಲ್ ಕ್ಯಾಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂಥ ಕ್ಯಾಡೆಟ್ ಪರಿವೀಕ್ಷಕನಾಗಿ ಅವನು ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.

**4.** **ಹುದ್ದೆಗಳ ವರ್ಗೀಕರಣ:** ವಿವಿಧ ಪ್ರವರ್ಗಗಳಿಗೆ ಮೀಸಲಾತಿ ವಿವರಗಳನ್ನು ಕೆಳಗೆ ಒದಗಿಸಲಾಗಿದೆ. ಆದಾಗ್ಯೂ ಪ್ರಕಟಿತ ಹುದ್ದೆಗಳಿಗಿಂತ ಕಡಿಮೆ ಸಂಖ್ಯೆಯ ಹುದ್ದೆಗಳಿಗೆ ಆಯ್ಕೆಯನ್ನು ನಡೆಸಬಹುದಾದ ಹಕ್ಕು (ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ) ಅಧಿಕಾರ ಆಯ್ಕೆ ಸಮಿತಿಗೆ ಇದೆ. ರೋಸ್ಟರ್ ಬಿಂದುವನ್ನು 21ನೇ ಬಿಂದುವಿನಿಂದ ಆರಂಭಿಸಲಾಗಿದೆ.

| | **391 ಹುದ್ದೆ** | **ಬ್ಯಾಕ್‌ಲಾಗ್ ಹುದ್ದೆ 95** | **ಕೊರತೆ** | **ಮ.ಅ.** | **ಗ್ರಾ.ಅ** | **ಮಾ.ಸೈ.** | ಅಂಗವಿಕಲ | **ಕ.ಮಾ.** | **ಇತರೆ** | ಒಟ್ಟು |
|---|---|---|---|---|---|---|---|---|---|---|
| ಪ್ರವರ್ಗ – I | 12 | – | 04 | 7 | 06 | – | – | – | 03 | 16 |
| ಪ್ರವರ್ಗ – IIA | 45 | – | 15 | 18 | 20 | 04 | 02 | 02 | 14 | 60 |
| ಪ್ರವರ್ಗ – IIB | 12 | – | – | 05 | 04 | – | – | – | 03 | 12 |
| ಪ್ರವರ್ಗ – IIIA | 11 | – | – | 05 | 03 | – | – | – | 03 | 11 |
| ಪ್ರವರ್ಗ – IIIB | 14 | – | – | 05 | 05 | 01 | – | – | 03 | 14 |
| ಪಜಾ | 45 | 82 | – | 44 | 50 | 17 | 02 | 03 | 11 | 127 |
| ಪಪಂ | 09 | 13 | – | 08 | 07 | 04 | – | – | 03 | 22 |
| ಸಾಮಾನ್ಯ ಅರ್ಹತೆ | 129 | – | – | 37 | 28 | 14 | 04 | 08 | 38 | 129 |
| **ಒಟ್ಟು** | **277** | **95** | **19** | **129** | **123** | **40** | **08** | **13** | **78** | **391** |

**ಷರಾ:** ಹಿಂದಿನ ನೇಮಕಾತಿಯಲ್ಲಿ ಕೊರತೆಯಿದ್ದ ಪ್ರವರ್ಗ–I– 04, ಪ್ರವರ್ಗ–IIA–15, ಈ ನೇಮಕಾತಿಯಲ್ಲಿ ಸರಿದೂಗಿಸಬೇಕಾಗಿದೆ. ವಿಕಲಚೇತನರಿಗೆ OL (One Leg) ಹಾಗೂ HH (Hearing Handicap) ಮೀಸಲಾತಿ ಇದೆ.

ಮೇಲೆ ಕಾಣಿಸಿರುವ ವರ್ಗೀಕರಣವು ಮೀಸಲಾತಿ ಆದೇಶಗಳಲ್ಲಿ ಮಾರ್ಪಾಡು ಆದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ. ಪ್ರಸ್ತುತ ಸುತ್ತೋಲೆ ಸಂ. ಸಿಆಸುಇ/16/ಸೇನೇನಿ/2008 ದಿನಾಂಕ: 01.09.2008ರ ಸೂಚನೆಯನ್ನು ಅನುಸರಿಸಲಾಗುವುದು. ಅಲ್ಲದೇ, ಹಾಲಿ ಆಹ್ವಾನಿಸಿದ 391 ಖಾಲಿ ಹುದ್ದೆಗಳ ಸಂಖ್ಯೆ ಮುಂದೆ ಸರ್ಕಾರದ ಆದೇಶಕ್ಕನುಗುಣವಾಗಿ ಹೆಚ್ಚು ಅಥವಾ ಕಡಿಮೆಯಾಗುವ ಬದಲಾವಣೆಗೆ ಒಳಪಟ್ಟಿರುತ್ತದೆ.

**4.1 ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು**

ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಗೆ ನಮೂದಿಸಿರುವ ನಮೂನೆಗಳಲ್ಲಿಯೇ ಮೀಸಲಾತಿ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು. ಅದರ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

| | | |
|---|---|---|
| ಅ) | ಪರಿಶಿಷ್ಟ ಜಾತಿ ಮಾತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | ನಮೂನೆ 'ಡಿ' |
| ಆ) | ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು | ನಮೂನೆ 'ಇ' |
| ಇ) | ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು | ನಮೂನೆ 'ಎಫ್' |

ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಸೀಲ್ದಾರ್‌ರವರಿಂದ ಪಡೆದಿಟ್ಟುಕೊಂಡು ಅದೇ ಪ್ರಮಾಣ ಪತ್ರವನ್ನು ಕೌನ್ಸಿಲಿಂಗ್ ಸಮಯದಲ್ಲಿ ಹಾಜರುಪಡಿಸತಕ್ಕದ್ದು.

ಈ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ಅರ್ಹರಾದಲ್ಲಿ ಮಾತ್ರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅನುಬಂಧದಲ್ಲಿ ತೋರಿಸಲಾಗಿದೆ. ಈ ನಮೂನೆಗಳನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಗಳಲ್ಲಿ ಪಡೆಯಲಾದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

4.2 ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಹೊರತುಪಡಿಸಿ ಉಳಿದಂತೆ ಯಾವುದೇ ಪ್ರವರ್ಗಗಳ ಅಭ್ಯರ್ಥಿಗಳಲ್ಲಿ ಕೊರತೆಯಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡುವ ಅಧಿಕಾರ ಆಯ್ಕೆ ಸಮಿತಿಗಿದೆ.

5. ಗ್ರಾಮೀಣ ಆಭ್ಯರ್ಥಿಗಳೆಂದು ಮೀಸಲಾತಿ ಬಯಸುವವರು ಸರ್ಕಾರದ ಆದೇಶ ಸಂಖ್ಯೆ. ಸಿಅಸುಇ/08/ಸೆನೆನಿ/2001 ದಿನಾಂಕ: 13.02.2001 ರಲ್ಲಿ ನಿಗಧಿಪಡಿಸಿದ ನಮೂನೆ–1 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಅಸುಇ/96/ಸೆನೆನಿ/2005 ದಿನಾಂಕ: 10.08.2005 ರಲ್ಲಿ ನಿಗಧಿಪಡಿಸಲಾದ ನಮೂನೆ–2 ರಲ್ಲಿ ಅಭ್ಯರ್ಥಿಗಳು ಉತ್ತೀರ್ಣರಾದ ಸಂಸ್ಥೆಯ ಪ್ರಾಂಶುಪಾಲರು / ಮುಖ್ಯೋಪಾಧ್ಯಾಯರು / ಮುಖ್ಯೋಪಾಧ್ಯಾಯಿನಿಯರಿಂದ ಕ್ಷೇತ್ರ ಶಿಕ್ಷಣಾಧಿಕಾರಿಯ ಮೇಲು ಸಹಿಯೊಂದಿಗೆ ಪಡೆಯಬೇಕು. ಈ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ಅಂತಿಮವಾಗಿ ವ್ಯಾಸಂಗಮಾಡಿದ ಸಂಸ್ಥೆ / ಶಾಲೆಗಳಲ್ಲಿ ಅಭ್ಯಾಸ ಮಾಡಿದ್ದಲ್ಲಿ ಈ ಬಗ್ಗೆ ಆ ಎಲ್ಲಾ ಸಂಸ್ಥೆಗಳಲ್ಲಿ ತಪಾಸಣೆ ಆಗಿರಬೇಕು.

ಅ) ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಅಧಿಸೂಚನೆ ಸಂಖ್ಯೆ. ಸಂವ್ಯಶಾಇ.59 ಶಾಸನ 2000, ದಿನಾಂಕ: 06.01.2001 ರಲ್ಲಿ ಕರ್ನಾಟಕ ಗ್ರಾಮೀಣ ಆಭ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ) ನೇಮಕಾತಿಗಳ ಅಥವಾ ಹುದ್ದೆಗಳ ಮೀಸಲಾತಿಗಾಗಿ ವಿಧೇಯಕ 2000ದಡಿ ಅವಕಾಶ ಕಲ್ಪಿಸಿ, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಸರ್ಕಾರವು ದಿನಾಂಕ: 13.02.2001 ರಲ್ಲಿ ಜಾರಿಗೊಳಿಸಲಾದ ಆದೇಶ ಸಂಖ್ಯೆ ಸಿಆಸುಇ 08 ಸೆನೆನಿ 2001 ನಿಯಮಗಳ ಕಂಡಿಕೆ 3, 4 ಹಾಗೂ 5(1) ರಿಂದ (3) ರನ್ನು ಈ ಕೆಳಗೆ ಉದ್ಧರಿಸಿದೆ.

3. ಸದರಿ ಅಧಿನಿಯಮದಲ್ಲಿ ಗ್ರಾಮೀಣ ಆಭ್ಯರ್ಥಿಯನ್ನು ಈ ಕೆಳಗೆ ಉದ್ಧರಿಸಿದಂತೆ ಪರಿಭಾಷಿಸಲಾಗಿದೆ.

i) ಗ್ರಾಮೀಣ ಆಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯ ಎಸ್.ಎಸ್.ಎಲ್.ಸಿ. ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ;

4. ಈ ಹಿನ್ನೆಲೆಯಲ್ಲಿ ಮೇಲೆ ವಿವರಿಸಿದ ಅಂಶಗಳನ್ನು ಒಳಗೊಂಡ, ಅಂದರೆ (1) ವ್ಯಾಸಂಗ (Study) (2) ಮೀಸಲಾತಿಯ ವರ್ಗ ಮತ್ತು (3) ಮೇಲುಸ್ತರದ ಪರಿಕಲ್ಪನೆ (Creamy Layer Concept) ಈ ಅಂಶಗಳನ್ನು ಒಳಗೊಂಡ ಪ್ರಮಾಣ ಪತ್ರವನ್ನು ಯಾರು ನೀಡಬೇಕು ಎಂಬ ಬಗ್ಗೆ ಸರ್ಕಾರ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

5. ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ) ನೇಮಕಾತಿಗಳ ಅಥವಾ ಹುದ್ದೆಗಳ ಮೀಸಲಾತಿ ಅಧಿನಿಯಮ, 2000 ರ ಸೆಕ್ಷನ್ 5 ರಿಂದ ಈ ಕೆಳಕಂಡ ಕಾರ್ಯ ವಿಧಾನವನ್ನು ನಿಗಧಿಪಡಿಸಿದೆ.

1 ಸಂಬಂಧಿಸಿದ ಅಭ್ಯರ್ಥಿಯು ಯಾವ ಇತರೆ ಹಿಂದುಳಿದ ವರ್ಗಕ್ಕೆ (Other Backward Class) ಸೇರಿದ್ದಾನೆ (ಅದರಲ್ಲಿ ಅವನು ಮೇಲುಸ್ತರದ ಪರಿಕಲ್ಪನೆಯಡಿಯಲ್ಲಿ (Creamy Layer Concept) ಬರುವುದಿಲ್ಲವೆನ್ನುವುದು ಒಳಗೊಂಡಿರುತ್ತದೆ) ಎನ್ನುವ ಬಗ್ಗೆ ಸರ್ಕಾರ (ಅಂದರೆ ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿನ ಸಮಾಜ ಕಲ್ಯಾಣ ಇಲಾಖೆ) ಕರ್ನಾಟಕ ಅನುಸೂಚಿತ ಜಾತಿಗಳು ಅನುಸೂಚಿತ ಬುಡಕಟ್ಟುಗಳು ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿಗಳು ಮುಂತಾದವುಗಳ ಮೀಸಲಾತಿ) ಅಧಿನಿಯಮ, 1990 ರಡಿಯಲ್ಲಿ ನಿಗಧಿಪಡಿಸಿದ ಕಾರ್ಯ ವಿಧಾನದ ಪ್ರಕಾರ ಪ್ರಮಾಣ ಪತ್ರವನ್ನು ಪಡೆಯತಕ್ಕದ್ದು. (ಇತರೆ ಹಿಂದುಳಿದ ವರ್ಗಕ್ಕೆ ಸೇರಿದ ಪ್ರವರ್ಗ– I ಮತ್ತು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ ಸೇರಿದ ಅಭ್ಯರ್ಥಿಗಳಿಗೆ ಮೇಲುಸ್ತರದ ಪರಿಕಲ್ಪನೆ (Creamy Layer Concept) ಅನ್ವಯವಾಗುವುದಿಲ್ಲ). ಅಂದರೆ ಜನರಲ್ ಮೆರಿಟ್ ಸೇರಿದಂತೆ ಹಿಂದುಳಿದ ವರ್ಗಗಳಾದ ಪ್ರವರ್ಗ 2ಎ, ಪ್ರವರ್ಗ 2ಬಿ, ಪ್ರವರ್ಗ 3ಎ, ಮತ್ತು ಪ್ರವರ್ಗ 3ಬಿ ಅಭ್ಯರ್ಥಿಗಳಿಗೆ ಮೇಲುಸ್ತರದ ಪರಿಕಲ್ಪನೆ ಅನ್ವಯವಾಗುತ್ತದೆ.

2 ಜನರಲ್ ಮೆರಿಟ್ ವರ್ಗಕ್ಕೆ ಸೇರಿದ ಅಂದರೆ ಮೇಲುಸ್ತರದ ಪರಿಕಲ್ಪನೆಯ ವ್ಯಾಪ್ತಿಯಲ್ಲಿ ಬಾರದ ಗ್ರಾಮೀಣ ಅಭ್ಯರ್ಥಿಗಳು ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಸೀಲ್ದಾರ್‌ರವರಿಂದ ಈ ಆದೇಶಕ್ಕೆ ಲಗತ್ತಿಸಿದ ನಮೂನೆ–1 ರಲ್ಲಿ ಪಡೆಯತಕ್ಕದ್ದು.

6. ಸರ್ಕಾರಿ ಅಧಿಸೂಚನೆ ಸಂಖ್ಯೆ. ಸಿಆಸುಇ/71/ಸೆನೆನಿ/2001 ದಿನಾಂಕ: 24.10.2002 ರನ್ವಯ ಶೇಕಡಾ 5% ರಷ್ಟು ಹುದ್ದೆಗಳನ್ನು (18 ಹುದ್ದೆಗಳು) ಒಂದನೇ ತರಗತಿಯಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಓದಿರುವ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು. ಇದಕ್ಕೆ ಆಧಾರವಾಗಿ ಕ್ಯುಮ್ಯುಲೇಟೀವ್ ರೆಕಾರ್ಡ್‌ನ ಪ್ರಮಾಣೀಕೃತ ಉಧೃತಾ ಭಾಗವನ್ನು ಲಗತ್ತಿಸುವುದು.

7. ಈ ಅಧಿಸೂಚನೆಯನ್ವಯ ಆಯ್ಕೆಯಾಗುವ ಅಭ್ಯರ್ಥಿಗಳು ರಾಜ್ಯದ ಯಾವುದೇ ಭಾಗದಲ್ಲಿ ಸೇವೆ ಸಲ್ಲಿಸಲು ಬದ್ಧರಾಗಿರತಕ್ಕದ್ದು.

8. **ಅರ್ಜಿಯೊಂದಿಗೆ ಲಗತ್ತಿಸಬೇಕಾದ ದೃಢೀಕೃತ ಜೆರಾಕ್ಸ್ ದಾಖಲಾತಿಗಳು:–**

(i) (ಎ) ಬಿ.ವಿ.ಎಸ್‌ಸಿ./ಬಿ.ವಿ.ಎಸ್‌ಸಿ ಅಂಡ್ ಎಹೆಚ್ ಪದವಿಯ ಎಲ್ಲಾ ವರ್ಷಗಳ (ಸೆಮಿಸ್ಟರ್) ಅಂಕಪಟ್ಟಿಗಳು
(ಬಿ) ಸಂಬಂಧಪಟ್ಟ ವಿಶ್ವ ವಿದ್ಯಾನಿಲಯ ನೀಡಿರುವ ತ್ರೈಮಾಸಿಕ ಪದ್ಧತಿಯ ಅಂಕಪಟ್ಟಿಯ ಪರಿವರ್ತಕ ಕೋಷ್ಟಕ ಪ್ರಮಾಣ ಪತ್ರ (ಸರ್ಟಿಫಿಕೇಟ್‌ಗಳು)
(Trimester system's Marks card conversion certificate issued by the concerned University

(ii) ಚಾಲ್ತಿಯಲ್ಲಿರುವ ಪಶುವೈದ್ಯಕೀಯ ಪರಿಷತ್ತಿನ ನೋಂದಣಿ ಪ್ರಮಾಣ ಪತ್ರ

(iii) ಘಟಿಕೋತ್ಸವ ಪದವಿ ಪ್ರಮಾಣ ಪತ್ರ (ಈಗಾಗಲೇ ಪಡೆದಿದ್ದಲ್ಲಿ ಮಾತ್ರ)

(iv) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಕ್ಯುಮ್ಯುಲೇಟೀವ್ ರೆಕಾರ್ಡ್‌ನ ಪ್ರಮಾಣೀಕೃತ ಉಧೃತಾ ಭಾಗ

(v) ವಿಕಲ ಚೇತನರು ಅಂಗವೈಕಲ್ಯದ ಬಗ್ಗೆ (ಶೇ. 40% OL (One Leg) ಹಾಗೂ HH (Hearing Handicap) ಸೂಕ್ತ ಪ್ರಾಧಿಕಾರದಿಂದ ವೈದ್ಯಕೀಯ ಪ್ರಮಾಣಪತ್ರ ಸಲ್ಲಿಸುವುದು.

(vi) ಅರ್ಜಿಯೊಂದಿಗೆ ಜಂಟಿ ನಿರ್ದೇಶಕರು (ಆಡಳಿತ) ಪದನಿಮಿತ್ತ ಸದಸ್ಯ ಕಾರ್ಯದರ್ಶಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ನಿರ್ದೇಶನಾಲಯ, ಬೆಂಗಳೂರು ರವರ ಹೆಸರಿಗೆ ಪಡೆದ ರೂ. 500/- (ರೂ. ಐದುನೂರು ಮಾತ್ರ) ಹಾಗೂ ಪ.ಜಾ., ಪ.ಪಂ., ಪ್ರವರ್ಗ– I ರವರು ರೂ. 250/– (ರೂ. ಇನ್ನೂರ ಐವತ್ತು ಮಾತ್ರ) ರ ಮೌಲ್ಯದ ಕ್ರಾಸ್ ಮಾಡಿದ ಇಂಡಿಯನ್ ಪೋಸ್ಟಲ್ ಆರ್ಡರ್ / ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ

ಡಿ.ಡಿ. ಮೂಲಕ ನಿಗಧಿತ ಶುಲ್ಕವನ್ನು ಸಂದಾಯ ಮಾಡತಕ್ಕದ್ದು. ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

(vii) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ).

(viii) ಪ.ಜಾ., ಪ.ಪಂ., ಪ್ರವರ್ಗ– I, ಪ್ರವರ್ಗ II ಎ, ಪ್ರವರ್ಗ II ಬಿ, ಪ್ರವರ್ಗ III ಎ, ಮತ್ತು ಪ್ರವರ್ಗ III ಬಿ ಮೀಸಲಾತಿ ಕೋರಿದ್ದಲ್ಲಿ ಸಂಬಂಧಿತ ಪ್ರಮಾಣ ಪತ್ರಗಳನ್ನು ಲಗತ್ತಿಸುವುದು.

(ix) ಕನ್ನಡ ಮಾಧ್ಯಮ/ಗ್ರಾಮೀಣ ಅಭ್ಯರ್ಥಿ ಮೀಸಲಾತಿ ಬಯಸುವವರು ಅವಶ್ಯ ದಾಖಲಾತಿ ಒದಗಿಸುವುದು.

(x) ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ಗುಣ ಮತ್ತು ನಡತೆ ಪ್ರಮಾಣ ಪತ್ರಗಳು ದ್ವಿಪ್ರತಿಗಳಲ್ಲಿ

(xi) ಅರ್ಜಿಯಲ್ಲಿ ಇತ್ತೀಚಿನ ಪಾಸ್ ಪೋರ್ಟ್ ಸೈಜಿನ ಎರಡು ಭಾವಚಿತ್ರಗಳನ್ನು ಅಂಟಿಸಿರಬೇಕು.

9. ಅಭ್ಯರ್ಥಿಗಳು ಭರ್ತಿಮಾಡಿದ ಅರ್ಜಿಗಳನ್ನು ಎಲ್ಲಾ ಸಂಬಂಧಿಸಿದ ದಾಖಲಾತಿಗಳು / ಅಂಕಪಟ್ಟಿಗಳ ದ್ವಿಪ್ರತಿಗಳೊಂದಿಗೆ ಖುದ್ದಾಗಿ ಅಥವಾ ನೋಂದಣಿ ಅಂಚೆ ಮುಖಾಂತರ ದಿನಾಂಕ: 03.01.2013 ರ ಸಂಜೆ 5.00 ಘಂಟೆಯೊಳಗೆ "ಸದಸ್ಯ ಕಾರ್ಯದರ್ಶಿಗಳು, ಇಲಾಖಾ ಆಯ್ಕೆ ಸಮಿತಿ, ಪಶುಸಂಗೋಪನೆ ಮತ್ತು ಪಶುವೈದ್ಯ ಸೇವಾ ಇಲಾಖೆ, ಆಯುಕ್ತರವರ ಕಾರ್ಯಾಲಯ, 2ನೇ ಮಹಡಿ, ಸರ್.ಎಂ. ವಿಶ್ವೇಶ್ವರಾಯ ಚಿಕ್ಕ ಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ವೀದಿ, ಬೆಂಗಳೂರು–560 001"" ಇರಿಗೆ ತಲುಪುವಂತೆ ಸಲ್ಲಿಸತಕ್ಕದ್ದು. ಯಾವುದೇ ಕಾರಣದಿಂದಾಗಿ ಅರ್ಜಿಯು ಇಲಾಖೆಗೆ ತಡವಾಗಿ ತಲುಪಿದ್ದಕ್ಕಾಗಿ ಅಥವಾ ಅರ್ಜಿಯು ತಲುಪದೇ ಇರುವುದಕ್ಕೆ ಆಯ್ಕೆ ಪ್ರಾಧಿಕಾರವು ಜವಾಬ್ದಾರಿಯಾಗಿರುವುದಿಲ್ಲ. ನಿಗಧಿತ ದಿನಾಂಕ ಮುಗಿದ ನಂತರ ಸಲ್ಲಿಸಿದ ಮೇಲ್ಕಂಡ ಅವಶ್ಯಕ ದಾಖಲೆಗಳನ್ನು ಆರ್ಜಿಯೊಂದಿಗೆ ಲಗತ್ತಿಸದ ಮತ್ತು ಅರ್ಜಿಯ ನಿಗಧಿತ ಅಂಕಣಗಳಲ್ಲಿ ಸಹಿ ಮಾಡದಿರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ದಿನಾಂಕವು ಬಂದ್/ಮುಷ್ಕರ ರಜೆಯಾಗಿದ್ದಲ್ಲಿ ಮಾರನೆಯ ದಿನವು ಕೊನೆಯ ದಿನಾಂಕವಾಗಿರುತ್ತದೆ.

10. ಅರ್ಜಿಗಳನ್ನೊಳಗೊಂಡ ಲಕೋಟೆಯ ಮೇಲೆ "ಪಶುವೈದ್ಯಾಧಿಕಾರಿಗಳ ಹುದ್ದೆಗೆ ಅರ್ಜಿ" ಎಂದು ದಪ್ಪ ಅಕ್ಷರಗಳಲ್ಲಿ ಬರೆಯತಕ್ಕದ್ದು. ಖುದ್ದಾಗಿ ಅರ್ಜಿಗಳನ್ನು ಸಲ್ಲಿಸುವ ಅಭ್ಯರ್ಥಿಗಳು ಸ್ವೀಕೃತಿ ಪಡೆಯತಕ್ಕದ್ದು.

11. ಈ ಪ್ರಕಟಣೆ ಹಾಗೂ ಅರ್ಜಿ ನಮೂನೆಯ ಕುರಿತು ಏನಾದರೂ ವಿವರಣೆ ಬೇಕಾದಲ್ಲಿ ಆಯುಕ್ತರ ಕಛೇರಿಯ ಸಿಬ್ಬಂದಿ ಶಾಖೆ ಅಧೀಕ್ಷಕರು–1 ಇವರನ್ನು ಸಂಪರ್ಕಿಸಬಹುದು. ದೂರವಾಣಿ ಸಂಖ್ಯೆ. 22864441

ಜಂಟಿ ನಿರ್ದೇಶಕರು (ಆಡಳಿತ)
ಪದನಿಮಿತ್ತ ಸದಸ್ಯ ಕಾರ್ಯದರ್ಶಿ
ಇಲಾಖಾ ಆಯ್ಕೆ ಸಮಿತಿ
ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ
ಬೆಂಗಳೂರು 560 001

## ನಮೂನೆ – 1

**ಜನರಲ್ ಮೆರಿಟ್ ಅಭ್ಯರ್ಥಿಗಳು ಮೇಲುಸ್ತರಕ್ಕೆ ಸೇರಿಲ್ಲವೆಂದು, ದೃಢೀಕರಿಸಿ ಗ್ರಾಮೀಣ ಮೀಸಲಾತಿ0ಯನ್ನು ಕೋರಲು ಸಲ್ಲಿಸಬೇಕಾದ ಪ್ರಮಾಣ ಪತ್ರ.**

**(ಜನರಲ್ ಮೆರಿಟ್ ಅಭ್ಯರ್ಥಿಗಳು ಭರ್ತಿಮಾಡಬೇಕಾದ ನಮೂನೆ)**

ಗೆ:

ತಹಸೀಲ್ದಾರ್‌ರವರಿಗೆ

_________________ ತಾಲ್ಲೂಕು

_________________ ಜಿಲ್ಲೆ

ಮಾನ್ಯರೇ,

ಶ್ರೀ/ಶ್ರೀಮತಿ ______________________________ ಎಂಬುವವರ ಮಗ / ಮಗಳು / ಪತಿ / ಪತ್ನಿ ______________________________ ಆದ ನಾನು ಮೇಲುಸ್ತರದಲ್ಲಿ (creamy layer) ಬರುವುದಿಲ್ಲವೆಂದು ನೇರ ನೇಮಕಾತಿ0ಯಲ್ಲಿ ಗ್ರಾಮೀಣ ಅಭ್ಯರ್ಥಿ ಮಿಸಲಾತಿ0ಯನ್ನು ಪಡೆ0ಯುವುದಕ್ಕಾಗಿ ಪ್ರಮಾಣ ಪತ್ರವನ್ನು ಪಡೆ0ಯಲು ತಮ್ಮಲ್ಲಿ ಈ ಕೆಳಕಂಡ ಮಾಹಿತಿಗಳನ್ನು ಒದಗಿಸುತ್ತ ಕೋರುತ್ತೇನೆ.

1. ಅಭ್ಯರ್ಥಿ0ಯ ಹೆಸರು ಮತ್ತು ಉದ್ಯೋಗ :

2. ಅಭ್ಯರ್ಥಿ0ಯ ಸ್ವಂತ ಸ್ಥಳ : ಗ್ರಾಮ :

   ತಾಲ್ಲೂಕು :

   ಜಿಲ್ಲೆ :

3. ಅಭ್ಯರ್ಥಿ0ಯು ಹುಟ್ಟಿದ ದಿನಾಂಕ ವ0ಯಸ್ಸು ಮತ್ತು ಹುಟ್ಟಿದ ಸ್ಥಳ :

4. ಅಭ್ಯರ್ಥಿ0ಯ ತಂದೆ/ತಾಯಿ/ಪೋಷಕರ/ಪತಿ/ಪತ್ನಿ ಹೆಸರು ಮತ್ತು ಉದ್ಯೋಗ

   ಉದ್ಯೋಗವು ಸರ್ಕಾರಿ: ಅರೆ ಸರ್ಕಾರಿ :

   ಸಾರ್ವಜನಿಕ ಉದ್ದಿಮೆ :

   ಖಾಸಗಿ :

5. ಅಭ್ಯರ್ಥಿ0ಯ ಪ್ರಸ್ತುತ ವಿಳಾಸ (ಸ್ಪಷ್ಟವಾಗಿ ನಮೂದಿಸುವುದು) :

6. ಅಭ್ಯರ್ಥಿ0ಯ ಖಾ0ಯಂ ಅಂಚೆ ವಿಳಾಸ :

7. ಅಭ್ಯರ್ಥಿ0ಯ ಶಾಲಾ ಶಿಕ್ಷಣದ ವ್ಯಾಸಂಗ ಮಾಡಿದ ಶಾಲೆಗಳ ವಿವರಗಳು

   ಪ್ರಾಥಮಿಕ :

   ಮಾಧ್ಯಮಿಕ :

   ಪ್ರೌಢ :

8. ಅಭ್ಯರ್ಥಿಯ ಹಾಗೂ ಅಭ್ಯರ್ಥಿಯ ತಂದೆ/ತಾಯಿ/ಪೋಷಕರ (ತಂದೆ/ತಾಯಿ ಜೀವಂತರಾಗಿರದಿದ್ದಲ್ಲಿ) ಪತಿ/ಪತ್ನಿ ಇವರ ಒಟ್ಟು ವಾರ್ಷಿಕ ಆದಾಯ ಎಲ್ಲ ಮೂಲಗಳಿಂದ :

1. ವೇತನ (ವೇತನ ಶ್ರೇಣಿ) :

2. ಜಮೀನಿನ ವಿವರಗಳು :

3. ಇತರೆ ಮೂಲಗಳಿಂದ :

9. ಆದಾಯ ತೆರಿಗೆ ಪಾವತಿದಾರರೆ? :

10. ಸಂಪತ್ತು ತೆರಿಗೆ ಪಾವತಿದಾರರೆ? ;

11. ಮಾರಾಟ ತೆರಿಗೆ ಪಾವತಿದಾರರೆ? :

**ಪ್ರಮಾಣೀಕೃತ ಘೋಷಣೆ**

ಈ ಮೇಲೆ ನನ್ನಿಂದ ಒದಗಿಸಲಾದ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಪ್ರಮಾಣೀಕರಿಸಿ ಘೋಷಿಸುತ್ತೇನೆ.

ಸ್ಥಳ :
ದಿನಾಂಕ:

ತಮ್ಮ ವಿಧೇಯ

(ಅಭ್ಯರ್ಥಿಯ ಸಹಿ)

ಮೇಲೆ ಒದಗಿಸಲಾದ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತಾ, ಈ ಮಾಹಿತಿಗಳು ಅಸತ್ಯವೆಂದು ದೃಢಪಟ್ಟಲ್ಲಿ ಅಪರಾಧ ವಿಚಾರಣೆಗೆ ಬದ್ಧನಾಗಿರುತ್ತೇನೆ.

ತಂದೆ/ತಾಯಿ ಪೋಷಕರ ಸರಿ
(ತಂದೆ/ತಾಯಿ ಜೀವಂತವಾಗಿರದಿದ್ದಲ್ಲಿ)
ಪತಿ /ಪತ್ನಿ ಇವರ ಸಹಿ

**ಇಬ್ಬರು ಸ್ಥಳೀಯ ಸಾಕ್ಷಿಗಳು**

ಅಭ್ಯರ್ಥಿಯ ಮತ್ತು ತಂದೆ/ತಾಯಿ/ಪೋಷಕರ/ಪತಿ/ಪತ್ನಿ ಇವರನ್ನು ಹಾಗೂ ಇವರ ಸಹಿಯನ್ನು ನಾವು ಗುರುತಿಸುತ್ತೇವೆ:

ಸಾಕ್ಷಿಗಳ ಸಹಿ
(ಪೂರ್ಣ ವಿಳಾಸದೊಂದಿಗೆ)

1.

2.

## ಪರಿಶೀಲನಾ ಪ್ರಮಾಣ ಪತ್ರ

1. ಶ್ರೀ/ಶ್ರೀಮತಿ : ______________ ಇವರ ಮಗ/ಮಗಳು/ಪತಿ/ಪತ್ನಿ ______________ ಶ್ರೀ/ಶ್ರೀಮತಿ/ ಕುಮಾರಿ ______________ ಎಂಬುವವರು ಕರ್ನಾಟಕ ರಾಜ್ಯದ ______________ಜಿಲ್ಲೆಯ ವಿಭಾಗ______________ ಗ್ರಾಮ/ಪಟ್ಟಣ/ ನಗರದಲ್ಲಿ ಸಾಮಾನ್ಯ ನಿವಾಸಿಯಾಗಿದ್ದಾರೆಂದು ಮತ್ತು ಇವರು ಜನರಲ್ ಮೆರಿಟ್ ವರ್ಗಕ್ಕೆ ಸೇರಿದವರಾಗಿರುತ್ತಾರೆ.

2. ಶ್ರೀ/ಶ್ರೀಮತಿ/ಕುಮಾರಿ: ______________ ಇವರ ಪೋಷಕರು ಇವರು ಸರ್ಕಾರಿ ಆದೇಶ ಸಂಖ್ಯೆ ಎಸ್‌ಡಬ್ಲ್ಯೂಡಿ 251 ಬಿಸಿಎ 94, ಬೆಂಗಳೂರು, ದಿನಾಂಕ: 31.01.1995 ರನ್ವಯ ಜನರಲ್ ಮೆರಿಟ್ ವರ್ಗದ ಮೇಲುಸ್ತರದಲ್ಲಿ (creamy layer) ಬರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ತಹಸೀಲ್ದಾರ್

ದಿನಾಂಕ: ______________ ತಾಲ್ಲೂಕು

**ಸೂಚನೆ–1**

ಇದರಲ್ಲಿ ಉಪಯೋಗಿಸಲಾಗಿರುವ **"ಸಾಮಾನ್ಯ ನಿವಾಸಿ"** ಎಂಬ ಪದವು 1950ರ ಜನತಾ ಪ್ರಾತಿನಿಧ್ಯ ಕಾಯಿದೆಯ 20ನೇ ಅನುಚ್ಛೇದದಲ್ಲಿನ ಅರ್ಥವನ್ನು ಹೊಂದಿರುತ್ತದೆ.

**ಸೂಚನೆ–1**

ಪರಿಶೀಲನಾ ಪ್ರಮಾಣ ಪತ್ರ ನೀಡುವ ಅಧಿಕೃತ ಅಧಿಕಾರಿಯು ಸರ್ಕಾರಿ ಆದೇಶ ಸಂಖ್ಯೆ. ಎಸ್‌ಡಬ್ಲ್ಯೂಡಿ 251 ಬಿಸಿಎ 95, ಬೆಂಗಳೂರು ದಿನಾಂಕ: 31.01.1995 ರನ್ವಯ ಮೇಲುಸ್ತರದವರನ್ನು ಗುರುತಿಸಲು ನಿಗಧಿಪಡಿಸಲಾಗಿರುವ ಅಂಶಗಳನ್ನು ವಿವರವಾಗಿ ಖಚಿತಪಡಿಸಿಕೊಂಡ ನಂತರವೇ ಪ್ರಮಾಣ ಪತ್ರ ನೀಡತಕ್ಕದ್ದು.

## ನಮೂನೆ – 2

## ಗ್ರಾಮೀಣ ಅಭ್ಯರ್ಥಿ ಪ್ರಮಾಣ ಪತ್ರ

ಶ್ರೀ/ಶ್ರೀಮತಿ ______________ ರವರ ಮಗ/ಮಗಳು/ಪತಿ/ಪತ್ನಿ, ಶ್ರೀ/ಶ್ರೀಮತಿ/ಕುಮಾರಿ: ______________ ಜಿಲ್ಲೆ ______________ ತಾಲ್ಲೂಕು ______________ ಗ್ರಾಮದಲ್ಲಿ ______________ ವಾಸವಾಗಿರುವ ಇವರು ಒಂದನೇ ತರಗತಿಯಿಂದ ______________ ತರಗತಿಯವರೆಗೆ ______________ ಜಿಲ್ಲೆ ______________ ತಾಲ್ಲೂಕು ______________ ಪಟ್ಟಣ ಶಾಲೆಯಲ್ಲಿ ವ್ಯಾಸಂಗ ಮಾಡಿ ______________ ವರ್ಷ ನಡೆದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಈ ಶಾಲೆಯು ಅಭ್ಯರ್ಥಿಯು ವ್ಯಾಸಂಗ ಮಾಡಿದ ಅವಧಿಯಲ್ಲಿ ಕರ್ನಾಟಕದ ಪೌರ–ನಿಗಮಗಳ ಅಧಿನಿಯಮ, 1976 ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ನಗರಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶಗಳ ಹೊರತಾದ ಪ್ರದೇಶದಲ್ಲಿತ್ತು.

(ಸಹಿ)

ಮುಖ್ಯೋಪಾಧ್ಯಾಯರು

ಮೇಲುರುಜು

ಕ್ಷೇತ್ರ ಶಿಕ್ಷಣಾಧಿಕಾರಿ

**ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ**

ಶ್ರೀ / ಶ್ರೀಮತಿ ____________________ರವರ ಮಗ / ಮಗಳು / ಪತ್ನಿ ಶ್ರೀ/ ಶ್ರೀಮತಿ / ಕುಮಾರಿ: ____________ ಜಿಲ್ಲೆ ________ ತಾಲ್ಲೂಕು ____________ ಗ್ರಾಮದಲ್ಲಿ ______________ ವಾಸವಾಗಿರುವ ಇವರು ____________ ತರಗತಿಯಿಂದ ____________ ತರಗತಿಯವರೆಗೆ ______________ ಶೈಕ್ಷಣಿಕ ವರ್ಷದಿಂದ __________ ಶೈಕ್ಷಣಿಕ ವರ್ಷದವರೆಗೆ ____________________________ ಶಾಲೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

ದಿನಾಂಕ: ________ ಮುಖ್ಯೋಪಾಧ್ಯಾಯರ ಸಹಿ ಮತ್ತು ಸಂಸ್ಥೆಯ ಮೊಹರು

ಸ್ಥಳ : ________

**ಸೂಚನೆ:** ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಶಾಲೆಗಳಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಶಾಲಾವಾರು ಪ್ರತ್ಯೇಕ ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ ಸಲ್ಲಿಸಬೇಕು,

**Office of the Commissioner, Animal Husbandry & Veterinary Services, 2nd Floor,**
**Sir. M. Vishveshwaraya Mini Tower, Dr. B.R. Ambedkar Veedhi, Bangalore – 560 001**

**ಆಯುಕ್ತರವರ ಕಾರ್ಯಾಲಯ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, 2ನೇ ಮಹಡಿ,**
**ಸರ್.ಎಂ. ವಿಶ್ವೇಶ್ವರಾಯ ಚಿಕ್ಕ ಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು – 560 001**

**APPLICATION FOR DIRECT RECRUITMENT FOR VETERINARY OFFICERS IN THE DEPARTMENT OF ANIMAL HUSBANDRY & VETERINARY SERVICES**

**ನೇರ ನೇಮಕಾತಿಗಾಗಿ ಅರ್ಜಿ ನಮೂನೆ**

**ವಿ.ಸೂ:**
1. ದಿನಾಂಕ: ________ ರ ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆಯನ್ನು ಓದಲು ತಿಳಿಸಿದೆ.
2. ಅರ್ಜಿಯೊಂದಿಗೆ ನೀಡಿರುವ ತಾಳೆಪಟ್ಟಿಯಲ್ಲಿದ್ದಂತೆ ದಾಖಲಾತಿಗಳನ್ನು ಲಗತ್ತಿಸುವುದು.
3. ಗಣಕೀಕರಿಸುವುದರಿಂದ ಅರ್ಜಿಯನ್ನು ಮಡಚುವುದು, ಕೊಳೆ ಮಾಡುವುದನ್ನು ತಪ್ಪಿಸಿ.

Paste your recent passport size photograph duly signed within this box only (Do not pin or staple) (Please affix your signature in the box below)

NOTIFICATION NO. & DATE: ______________________

ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ: ______________________

POST APPLIED FOR ____________________________

(indicate here the post and department)

ಅರ್ಜಿ ಹಾಕಿದ ಹುದ್ದೆ ಮತ್ತು ಇಲಾಖೆಯ ಹೆಸರು : ____________________

1. Name : (In capitals as in SSLC or X standard marks card)

ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದಲ್ಲಿ ನಮೂದಿಸಿರುವಂತೆ).

2. Father's name / Husband's Name (Strikeout whichever is not applicable)

ತಂದೆಯವರ / ಪತಿಯ ಹೆಸರು : (ಅನ್ವಹಿಸದಿರುವುದನ್ನು ಹೊಡೆದುಹಾಕಿ)

3. Postal address : (In capitals)

ಅಂಚೆ ವಿಳಾಸ (ದಪ್ಪ ಅಕ್ಷರಗಳಲ್ಲಿ)

PHONE NO. PIN CODE

4. Permanent address: (In capitals)

ಖಾಯಂ ವಿಳಾಸ (ದಪ್ಪ ಅಕ್ಷರಗಳಲ್ಲಿ)

PHONE NO. PIN CODE

5. Details of IPO/D.D. enclosed:

ನಿಗಧಿತ ಶುಲ್ಕ ಪಾವತಿಸಿದ ಐ.ಪಿ.ಓ. ಅಥವಾ ಡಿ.ಡಿ.ಯ ವಿವರ:

| Name & address of the Post Office/Bank<br>ಅಂಚೆ ಕಛೇರಿ/ಬ್ಯಾಂಕಿನ ವಿಳಾಸ | Number and date of postal order/demand draft<br>ಡಿ.ಡಿ./ಐ.ಪಿ.ಓ. ಸಂಖ್ಯೆ ಮತ್ತು ದಿನಾಂಕ | Amount<br>ಮೊತ್ತ |
|---|---|---|
| | | |

6. Date of birth: (As in SSLC or equivalent examination certificate)

ಜನ್ಮ ದಿನಾಂಕ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆ ಪ್ರಮಾಣ ಪತ್ರದಲ್ಲಿ ನಮೂದಿಸಿರುವಂತೆ)

| Day<br>ದಿನ | Month<br>ತಿಂಗಳು | Year<br>ವರ್ಷ | Age*<br>ವಯಸ್ಸು* |
|---|---|---|---|
| | | | |

*In case you claim age relaxation, mention the relevant provisions for details see the Notification.

7. Gender : Write 'M' for Male 'F' for Female

ಲಿಂಗ : ಸ್ತ್ರೀ / ಪುರುಷ ಎಂಬುದು ನಮೂದಿಸುವುದು.

8. Reservation claimed:
ಕೋರಿರುವ ಮೀಸಲಾತಿ : ಸಂಬಂಧಪಟ್ಟ ಮೀಸಲಾತಿಯನ್ನು ನಮೂದಿಸುವುದು.

(a) Indicate your Reservation : Category: 1, 2A, 2B, 3A, 3B, SC, ST, GM
ಪ್ರ.ವ.1, 2ಎ, 2ಬಿ, 3ಎ, 3ಬಿ, ಎಸ್.ಸಿ., ಎಸ್.ಟಿ., ಸಾ.ಅ. ☐

(b) Sub caste
ಉಪ ಜಾತಿ ☐

9. Do you come under following reservation:
ಕೆಳಕಂಡ ಮೀಸಲಾತಿ ಸೌಲಭ್ಯ ಬಯಸುವ ಅಭ್ಯರ್ಥಿಯೇ?

| ☐ | ☐ | ☐ | ☐ |
|---|---|---|---|
| Rural<br>ಗ್ರಾ.ಅ | KMS<br>ಕಮಾಅ | Ex-MP<br>ಮಾಸೈ | WR<br>ಮ.ಅ |

10. Do you possess the prescribed educational qualification, if so, furnish the details below:-

ನಿಗಧಿತ ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು:–

| Qualification<br>ವಿದ್ಯಾರ್ಹತೆ | Overall percentage of marks (all the years/Semesters)<br>ತ್ರೈಮಾಸಿಕ ಪದ್ಧತಿಯ ಪರಿವರ್ತಕ ಕೋಷ್ಠಕದನ್ವಯ ಗಳಿಸಿದ ಅಂಕಗಳು | Year of passing<br>ತೇರ್ಗಡೆ ಹೊಂದಿದ ವರ್ಷ | University/Board<br>ಸಂಬಂಧಪಟ್ಟ ವಿಶ್ವವಿದ್ಯಾನಿಲಯ |
|---|---|---|---|
| | | | |

11. Have you registered with Veterinary Council / Reg. No. & Date
ಪಶುವೈದ್ಯಕೀಯ ಪರಿಷತ್‌ನಲ್ಲಿ ನೊಂದಾಯಿಸಲಾಗಿದೆಯೇ? / ನೊಂದಣೀ ಸಂ. ಮತ್ತು ದಿನಾಂಕ

| No. | Yes | No |
|---|---|---|
| ಸಂಖ್ಯೆ. | ಹೌದು | ಇಲ್ಲ |

12. Do you know Kannada language?
ಕನ್ನಡ ಭಾಷೆ ಅರಿತಿರುವಿರಾ?
If Yes
ಹೌದಾದರೆ

| Yes | No |
|---|---|
| ಹೌದು | ಇಲ್ಲ |
| Read | Write |
| ಓದಲು | ಬರೆಯಲು |

## DECLARATION

## ಘೋಷಣೆ

1. I hereby declare that all contents made in this application are true, complete and correct to the best of my knowledge and belief. In the event of any information being found false or ineligibility being detected before or after the selection action can be taken against me by the selection committee/Government under rule 20 of the Karnataka Civil Services (General Recruitment) rules 1977 as amended from time to time.

ನಾನು ಈ ಅರ್ಜಿಯಲ್ಲಿ ನಮೂದಿಸಿರುವ ಎಲ್ಲ ಹೇಳಿಕೆ/ಮಾಹಿತಿಗಳು ಸತ್ಯವಾಗಿರುತ್ತೆ ಎಂದು ಹಾಗೂ ಸರಿಯಾಗಿರುತ್ತದೆ ಎಂದು ಘೋಷಿಸುತ್ತೇನೆ. ಈ ಮೇಲೆ ತಿಳಿಸಿದ ಯಾವುದೇ ಮಾಹಿತಿಗಳು ಸರಿಯಾಗಿಲ್ಲವೆಂದು ಆಯ್ಕೆ ಪೂರ್ವದಲ್ಲಾಗಲೀ ಅಥವಾ ನಂತರದಲ್ಲಾಗಲೀ ಕಂಡುಬಂದಲ್ಲಿ ಕಾಲಕಾಲಕ್ಕೆ ತಿದ್ದುಪಡಿ ಮಾಡಲಾದ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ–20ರ ಅನ್ವಯ ಸರ್ಕಾರವು / ಆಯ್ಕೆ ಸಮಿತಿ ಕೈಗೊಳ್ಳುವ ಕ್ರಮಕ್ಕೆ ನಾನು ಬದ್ಧನಾಗಿರುತ್ತೆನೆ.

2. I have carefully read Rule 20 of Karnataka Civil Services (General Recruitment) Rules 1977. I have read all the other instructions carefully and abide them.

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977 ರ ನಿಯಮ–20 ಹಾಗೂ ಈ ಸಂಬಂಧದಲ್ಲಿ ನೀಡಿರುವ ಎಲ್ಲಾ ಸೂಚನೆಗಳನ್ನು ಜಾಗರೂಕತೆಯಿಂದ ಓದಿಕೊಂಡಿದ್ದು ಅವುಗಳಿಗೆ ನಾನು ಬದ್ದನಾಗಿರುತ್ತೇನೆ.

3. I further declare that I fulfill all the eligibility conditions regarding age, educational qualifications, reservation claimed.

ನಾನು ಹುದ್ದೆಗೆ ನಿಗಧಿಪಡಿಸಲಾದ ವಿದ್ಯಾರ್ಹತೆ, ವಯೋಮಿತಿ ಮತ್ತು ಕೋರಿದ ಮೀಸಲಾತಿ ಬಗ್ಗೆ ಇತ್ಯಾದಿ ಎಲ್ಲ ನಿಬಂಧನೆಗಳನ್ನು ಈಡೇರಿಸಿದ್ದೇನೆಂದು ಘೋಷಿಸುತ್ತೇನೆ.

4. I have submitted my application through the proper channel (applicable only to the Government servant)

ಸಕ್ಷಮ ಪ್ರಾಧಿಕಾರದ ಮುಖಾಂತರ ಅರ್ಜಿ ಸಲ್ಲಿಸಿರುತ್ತೇನೆ. (ಸರ್ಕಾರಿ ನೌಕರರಿಗೆ ಮಾತ್ರ ಅನ್ವಹಿಸುವುದು)

Place: Signature of the Candidate

(Application not signed by the candidate will be rejected)

ಸ್ಥಳ ಅಭ್ಯರ್ಥಿಯ ಸಹಿ

(ಅಭ್ಯರ್ಥಿಯ ಸಹಿ ಇಲ್ಲದ ಅರ್ಜಿಯನ್ನು ತಿರಸ್ಕರಿಸಲಾಗುವುದು)

**PR - 179**

## ಕಾರ್ಮಿಕ ಸಚಿವಾಲಯ

**ಸಂಖ್ಯೆ.ಕಾಇ 44 ಎಲ್‌ಎಸ್‌ಐ 2012 ಬೆಂಗಳೂರು, ದಿನಾಂಕ:26–07–2012.**

### ಅಧಿಸೂಚನೆ

ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:23–01–2012ರಂದು ಪ್ರಕಟಿಸಿರುವ ಅಧಿಸೂಚನೆ ಸಂಖ್ಯೆ.ಪಿಎಸ್‌ಸಿ 26 ಆರ್‌ಟಿಬಿ 2011ರ ಪಟ್ಟಿಯಲ್ಲಿ ಆಯ್ಕೆಯಾದ 95 ಅಭ್ಯರ್ಥಿಗಳ ಪೈಕಿ ಆಯ್ಕೆ ಪಟ್ಟಿ ಕ್ರಮ ಸಂಖ್ಯೆ.76ರ ಡಾ:ಲೋಹಿತ್ ಯಾದವ್ ಆರ್. ಇವರನ್ನು ಕಾರ್ಮಿಕ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯ ವಿಮಾ ವೈದ್ಯಾಧಿಕಾರಿ ಹುದ್ದೆಗೆ ಕಾರ್ಮಿಕ ರಾಜ್ಯ ವಿಮಾ ಚಿಕಿತ್ಸಾಲಯ, ಮಾರ್ಗನ್ಸ್‌ಗೇಟ್, ಮಂಗಳೂರು ಇಲ್ಲಿಗೆ ವೇತನ ಶ್ರೇಣಿ ₹.28100–700–28800–800–33600–900–39000–1050–45300–1200–50100ಗಳಲ್ಲಿ ತಾತ್ಕಾಲಿಕವಾಗಿ ಈ ಕೆಳಗೆ ನಮೂದಿಸಿರುವ ನಿಬಂಧನೆ ಮತ್ತು ಷರತ್ತುಗಳಿಗೆ ಒಳಪಟ್ಟು ಈ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ.

### ಷರತ್ತುಗಳು

1) ನೇಮಕಾತಿ ಹೊಂದಿದ ಅಭ್ಯರ್ಥಿಯು ಎರಡು ವರ್ಷಗಳ ಖಾಯಂಪೂರ್ವ ಸೇವಾವಧಿಯಲ್ಲಿ ನಿಗಧಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು.
2) ಅಭ್ಯರ್ಥಿಯು ನಿರ್ದೇಶಕರು, ಕಾ.ರಾ.ವಿ. ಯೋಜನೆ ವೈದ್ಯಕೀಯ ಸೇವೆಗಳು, ರಾಜಾಜಿನಗರ, ಬೆಂಗಳೂರು ಇವರ ಮುಂದೆ ಈ ಅಧಿಸೂಚನೆಯು ನೋಂದಾಯಿತ ಅಂಚೆಯ ಮೂಲಕ ತಲುಪಿದ 15 ದಿನಗಳ ಒಳಗಾಗಿ ತಮ್ಮ ಸ್ವಂತ ಖರ್ಚು ವೆಚ್ಚದಲ್ಲಿ ಹಾಜರಾಗತಕ್ಕದ್ದು, ತಪ್ಪಿದಲ್ಲಿ, ನೇಮಕಾತಿ ಆದೇಶವನ್ನು ಯಾವುದೇ ಸೂಚನೆ ಇಲ್ಲದೆ ರದ್ದುಪಡಿಸಲಾಗುವುದು.
3) ಅಭ್ಯರ್ಥಿಯು ಎಲ್ಲಾ ಮೂಲ ದಾಖಲೆಗಳನ್ನು ಅಂದರೆ ವಿಮಾ ವೈದ್ಯಾಧಿಕಾರಿ ಹುದ್ದೆಗೆ ಗೊತ್ತುಪಡಿಸಿರುವ ವಿದ್ಯಾರ್ಹತೆಯ ಅಂಕಪಟ್ಟಿ, ಪದವಿ ಪ್ರಮಾಣ ಪತ್ರ ಜನ್ಮ ದಿನಾಂಕದ ದಾಖಲೆ ಹಾಗೂ ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡವಳಿಕೆ ಪ್ರಮಾಣ ಪತ್ರ ಇತ್ಯಾದಿಗಳನ್ನು ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ಇವರ ಮುಂದೆ ಹಾಜರುಪಡಿಸತಕ್ಕದ್ದು.
4) ಇವರ ನೇಮಕಾತಿ ಮತ್ತು ಸೇವಾ ಷರತ್ತುಗಳು, ಜಾರಿಯಲ್ಲಿರುವ ನಿಯಮಗಳು ಮತ್ತು ಮುಂದೆ ಜಾರಿ ಮಾಡಲಿರುವ ಆದೇಶಗಳ ಪ್ರಕಾರ ಇರುತ್ತದೆ.
5) ಕರ್ನಾಟಕ ಲೋಕ ಸೇವಾ ಆಯೋಗವು ನೀಡಿರುವ ಆಯ್ಕೆಪಟ್ಟಿಯ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆಯ ಆಧಾರದ ಮೇಲೆ ಜೇಷ್ಠತೆಯನ್ನು ಪರಿಗಣಿಸಲಾಗುವುದು.
6) ಅಭ್ಯರ್ಥಿಯು ಪ್ರಭಾರ ವರ್ಗಾವಣೆಯ ಪ್ರಮಾಣ ಪತ್ರಗಳನ್ನು ನಿರ್ದೇಶಕರು, ಕಾ.ರಾ.ವಿ. ಯೋಜನೆ ವೈದ್ಯಕೀಯ ಸೇವೆಗಳು, ರಾಜಾಜಿನಗರ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು.
7) ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿದ್ದಲ್ಲಿ ಸ್ನಾತಕೋತ್ತರ ವ್ಯಾಸಂಗವನ್ನು ಮುಂದುವರಿಸಲು ಅನುಮತಿಯನ್ನು ನೀಡಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋವಿಂದಸ್ವಾಮಿ**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ.
(ಕಾರಾವಿ ಯೋ (ವೈ) ಸೇವೆಗಳು)

**PR – 174**

## ನಿರ್ದೇಶನಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ

ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ಭವನ, ನಂ. 58, ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ರಸ್ತೆ, ಬೆಂಗಳೂರು

ಸಂ. ಸೈಕಪುಇ/ಸಿಬ್ಬಂದಿ/132/ಸಿನೇ/2012, ದಿನಾಂಕ 9ನೇ ನವೆಂಬರ್ 2012

**ವಿಷಯ :** 'ಸಿ' ವರ್ಗದ ಹುದ್ದೆಗೆ ನೇಮಕಾತಿ ಬಗ್ಗೆ ಪ್ರಕಟಣೆ ತಿದ್ದುಪಡಿ ಕುರಿತು.

**ಉಲ್ಲೇಖ :** ಅ) ತಮ್ಮ ಪತ್ರ ಸಂಖ್ಯೆ ಜಿಎಸ್‌ಪಿ/ಸಿಎ/1330/2012. ದಿನಾಂಕ 17–10–2012.

ಆ) ಕರ್ನಾಟಕ ರಾಜ್ಯಪತ್ರ ದಿನಾಂಕ 19–03–2009 (ಪ್ರತಿ ಲಗತ್ತಿಸಿದೆ.)

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ರಾಜ್ಯ ಪತ್ರದಲ್ಲಿ ಇಲಾಖೆಯ ಸಮ ಪತ್ರ ಸಂಖ್ಯೆ ದಿನಾಂಕ 25–2–2009 ರನ್ವಯ ಪ್ರಕಟಣೆಗಾಗಿ ಸಹಾಯಕರು–ಕಂ–ಬೆರಳಚ್ಚುಗಾರರು ಎಂದು ಸಲ್ಲಿಸಿರುವುದು ಸರಿಯಷ್ಟೆ. ಆದರೆ ಇಲಾಖಾ ವೃಂದ ಮತ್ತು ನೇಮಕಾತಿ 1984 ರನ್ವಯ, ಕ್ಲಾರ್ಕ್–ಕಂ–ಬೆರಳಚ್ಚುಗಾರರು ಎಂಬ ಹುದ್ದೆ ಎಂದು ಹೆಸರಿಸಬೇಕಾಗಿದ್ದಿದನ್ನು ತಪ್ಪಾಗಿ ಸಹಾಯಕರು–ಕಂ–ಬೆರಳಚ್ಚುಗಾರರು ಎಂದು ನಮೂದಿಸಿದ್ದನ್ನು ಬದಲಿಸಿ ನಿಯಮಾವಳಿಗಳ ಅನ್ವಯ ಈ ಕೆಳಗಿನಂತೆ ರಾಜ್ಯ ಪತ್ರದಲ್ಲಿ ಆದೇಶ ಹೊರಡಿಸಬೇಕೆಂದು ಅಸಲಿ ಸಹಿಯೊಂದಿಗೆ ದ್ವಿಪ್ರತಿಯಲ್ಲಿ ಮರು ಸಲ್ಲಿಸಿ ವಿನಂತಿಸಲಾಗಿದೆ.

**ಸಹಾಯಕ–ಕಂ–ಬೆರಳಚ್ಚುಗಾರರು**

ಎಂಬುದಕ್ಕೆ ಬದಲಿ ತಿದ್ದುಪಡಿ ಪದನಾಮ

**ಕ್ಲಾರ್ಕ್–ಕಂ–ಬೆರಳಚ್ಚುಗಾರರು**

2. ಮೇಲಿನ ಅಧಿಸೂಚನೆಗಳನ್ನು ಮುಂದಿನ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲು ಹಾಗೂ ಅದರ 20 ಪ್ರತಿಗಳನ್ನು ಈ ಕಾರ್ಯಾಲಯಕ್ಕೆ ಕಳುಹಿಸಿಕೊಡುವಂತೆ ಕೋರಲಾಗಿದೆ.

**ನಿರ್ದೇಶಕರು,**
ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ,
ಬೆಂಗಳೂರು.

**P.R.172**

## ಕರ್ನಾಟಕ ಲೋಕಸೇವಾ ಆಯೋಗ

ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ, ಬೆಂಗಳೂರು

### ತಿದ್ದುಪಡಿ ಅಧಿಸೂಚನೆ

ಸಂ. ಇಪ (2) 475/2012–13/ಪಿಎಸ್‌ಸಿ, ದಿನಾಂಕ 7ನೇ ನವೆಂಬರ್ 2012

2012ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ದಿನಾಂಕ 06–09–2012ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದ್ದು, ಸದರಿ ಫಲಿತಾಂಶಕ್ಕೆ ಈ ಕೆಳಕಂಡ ತಿದ್ದುಪಡಿಯನ್ನು ಸಂಬಂಧಿತರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ಅಪೆಂಡಿಕ್ಸ್ "ಎ"**

ಬೆಂಗಳೂರು ಕೇಂದ್ರ

**ಕನ್ನಡ ಭಾಷೆ**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ 12186 ನ್ನು ಸೇರಿಸಿ ಓದಿಕೊಳ್ಳುವುದು

**ಕೆ. ಆರ್. ಸುಂದರ್,**
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ,
ಬೆಂಗಳೂರು.

**P.R.170**

**ನಮೂನೆ–1**

**(ನಿಯಮ–9)**

**ಪೊಲೀಸ್ ಕಾರ್ಯಾಲಯ**

**ಜಿಲ್ಲಾ ಪೊಲೀಸ್ ಕಛೇರಿ, ಗದಗ**

**ಅಧಿಸೂಚನೆ**

ಶ್ರೀ ಮಂಜುನಾಥ ತಂದೆ ಗುರಪ್ಪ ಲಮಾಣಿ, ಸಿಎಚ್‌ಸಿ–632 ರವರು ಕೆಲಸ ಮಾಡುತ್ತಿರುವ ಇಲಾಖೆಯಲ್ಲಿ ಡಿ.ಸಿ.ಆರ್.ಬಿ. ಘಟಕ. ಡಿಪಿಓ ಪೊಲೀಸ್ ಕಾರ್ಯಾಲಯದಲ್ಲಿ ಗದಗ ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು ಶ್ರೀ ಮಂಜುನಾಥ ತಂದೆ ಗುರಪ್ಪ ನಾಯ್ಕ ಎಂದು ಬದಲಾವಣೆ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

**ಜಿಲ್ಲಾ ಪೊಲೀಸ್ ಅಧಿಕಾರಿಗಳು ಹಾಗೂ**
**ನೇಮಕಾಧಿಯವರ ಸಹಿ ಮತ್ತು ಪದನಾಮ**
ಗದಗ ಜಿಲ್ಲೆ, ಗದಗ

**P.D.133**

FORM-IV

(See Rule 12)

NOTICE

It is hereby notified that the undersigned has changed his name from Sri CHHAYA PANDURANG to CHHAYA SANJAY SARMALKAR.

**CHHAYA PANDURANG**

**PD-132**

FORM-IV

(See Rule 12)

NOTICE

It is hereby notified that the undersigned has changed his name from Sri SADASHIVA NANDUR to SADASHIVA PATIL.

**SADASHIVA NANDUR**

**PD-131**

**ನಿಬಂಧಕರ ಕಾರ್ಯಾಲಯ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು**

**ವಿಷಯ:** ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿಯಿರುವ ಗ್ರೂಪ್ 'ಡಿ' ವೃಂದದ ಹುದ್ದೆಗಳಾದ ದಲಾಯತ್/ದಲಾಯತ್–ಕಂ–ಸ್ವೀಪರ್/ ಸ್ವೀಪರ್ ಸೈಕಲ್ ಆರ್ಡರ್ಲಿ/ ಹೋಂ ಆರ್ಡರ್ಲಿ/ರಾತ್ರಿ ಕಾವಲುಗಾರರ ಹುದ್ದೆಗಳನ್ನು ನೇರ ನೇಮಕಾತಿಯಿಂದ ತುಂಬುವ ಬಗ್ಗೆ.

**ಉಲ್ಲೇಖ :**
1. ಈ ಸಂಸ್ಥೆಯ ಅಧಿಸೂಚನೆ ಸಂಖ್ಯೆ : ಕಲೋ/ಸಿಬ್ಬಂದಿ–1/50/2008–09 ದಿನಾಂಕ : 17–2–2010.
2. ಈ ಸಂಸ್ಥೆಯ ಸಮ ಸಂಖ್ಯೆಯ ಅಧಿಸೂಚನೆ ದಿನಾಂಕ : 25/7/2011.

ಉಲ್ಲೇಖ (1) ರ ಅಧಿಸೂಚನೆಯ ಪ್ರಕಾರ ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿ ಇರುವ ಗ್ರೂಪ್–ಡಿ ಹುದ್ದೆಗಳಾದ ದಲಾಯತ್/ದಲಾಯತ್–ಕಂ–ಸ್ವೀಪರ್/ ಸ್ವೀಪರ್/ ಸೈಕಲ್ ಆರ್ಡರ್ಲಿ/ ಹೋಂ ಆರ್ಡರ್ಲಿ/ ರಾತ್ರಿ ಕಾವಲುಗಾರರ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಉಲ್ಲೇಖ (2) ರ ಅಧಿಸೂಚನೆಯಲ್ಲಿ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿತ್ತು ತಾತ್ಕಾಲಿಕ ಆಯ್ಕೆ ಪಟ್ಟಿಯ ಅಭ್ಯರ್ಥಿಗಳ ಅಂಕ ಪಟ್ಟಿ ಹಾಗೂ ಇತರೆ ಮೀಸಲಾತಿ ಹಾಗೂ ನಡತೆ ಚಾರಿತ್ರ್ಯಗಳ ಬಗ್ಗೆ ಪರಿಶೀಲನಾ ವರದಿಯನ್ನು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದುಕೊಳ್ಳಲು ಪತ್ರ ವ್ಯವಹಾರ ಮಾಡಿದ ಸಂದರ್ಭದಲ್ಲಿ ಹಲವು ಅಭ್ಯರ್ಥಿಗಳ ಅಂಕಪಟ್ಟಿ ಹಾಗೂ ಇತರೆ ಮೀಸಲಾತಿಗಳು ನೈಜವಾಗಿರುವುದಿಲ್ಲವೆಂದು ವರದಿಯಾದ ಕಾರಣ, ಪ್ರತಿ ಮೀಸಲಾತಿಯಡಿ ತಾತ್ಕಾಲಿಕ ಆಯ್ಕೆ ಪಟ್ಟಿಯ ನಂತರದ ಶ್ರೇಯಾಂಕದ 1:3 ಅಭ್ಯರ್ಥಿಗಳ ಅಂಕ ಪಟ್ಟಿ ಹಾಗೂ ಇತರೆ ಮೀಸಲಾತಿ ಹಾಗೂ ನಡತೆ ಚಾರಿತ್ರ್ಯಗಳ ಬಗ್ಗೆ ಪರಿಶೀಲನಾ ವರದಿಯನ್ನು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದುಕೊಳ್ಳಲಾಯಿತು. ಈ ವರದಿಗಳ ಅನ್ವಯ ಕೆಳಕಂಡ ಅಭ್ಯರ್ಥಿಗಳ 7ನೇ ತರಗತಿಯ ಅಂಕಪಟ್ಟಿ ಮತ್ತು ಮೀಸಲಾತಿಗಳು ಸಿಂಧುವಾಗಿದ್ದು ಹಾಗೂ ಪೊಲೀಸ್ ವರದಿಗಳು ತೃಪ್ತಿಕರವಾಗಿರುವುದರಿಂದ ಇವರುಗಳನ್ನು ಶ್ರೇಯಾಂಕ ಮತ್ತು ಮೀಸಲಾತಿ ಪ್ರಕಾರ ಕರ್ನಾಟಕ ಲೋಕಾಯುಕ್ತ ಸಂಸ್ಥೆಯ ಗ್ರೂಪ್–ಡಿ ಹುದ್ದೆಗಳಾದ ದಲಾಯತ್/ದಲಾಯತ್–ಕಂ–ಸ್ವೀಪರ್/ಸ್ವೀಪರ್/ಸೈಕಲ್ ಆರ್ಡರ್ಲಿ/ ಹೋಂ ಆರ್ಡರ್ಲಿ/ ರಾತ್ರಿ ಕಾವಲುಗಾರರ ಹುದ್ದೆಯ ಅಂತಿಮ ಮುಖ್ಯ ಪಟ್ಟಿಯಲ್ಲಿ ಆಯ್ಕೆ ಮಾಡಲಾಗಿದೆ.

## ಅಂತಿಮ ಮುಖ್ಯ ಆಯ್ಕೆ ಪಟ್ಟಿ

| ಕ್ರಮ ಸಂಖ್ಯೆ | ಅರ್ಜಿ ಸಂಖ್ಯೆ | ಅಭ್ಯರ್ಥಿಯ ಹೆಸರು (ಶಾಲಾ ವರ್ಗಾವಣೆ ಪ್ರಮಾಣ ಪತ್ರದಲ್ಲಿದ್ದಂತೆ) | ಅಭ್ಯರ್ಥಿಯ/ಆಯ್ಕೆಯಾದ ಮೀಸಲಾತಿ | ಶ್ರೇಯಾಂಕ |
|---|---|---|---|---|
| 1. | 15015 | ಕೆ. ಮಣಿಕಂಠ | ಸಾ.ಅ (ಇತರೆ) | 98.500 |
| 2. | 4168 | ಪರಶುರಾಮಪ್ಪ. ಯು.ವಿ. | ಪ.ಜಾ/ಸಾ.ಅ (ಇತರೆ) | 98.500 |
| 3. | 10031 | ಚಿದಂಬರ ರಾಮಚಂದ್ರ ನಿಂಬರಗಿ | ಸಾ.ಅ (ಇತರೆ) | 98.333 |
| 4. | 3701 | ಪ್ರಕಾಶ್ | 3ಬಿ/ಸಾ.ಅ (ಇತರೆ) | 98.333 |
| 5. | 26375 | ಸಿದ್ದೇಶ್ವರಗೌಡ ಪಾಟೀಲ್ | ಪ್ರವರ್ಗ–3ಬಿ/ಸಾ.ಅ. (ಗ್ರಾಮೀಣ) | 98.333 |
| 6. | 10729 | ಕೃಷ್ಣಕುಮಾರ್ ಎಂ. | ಪ.ಜಾ/ಸಾ.ಅ. (ಗ್ರಾಮೀಣ) | 98.200 |
| 7. | 17698 | ಶಂಕರಯ್ಯ ಶಿವಯ್ಯ ಬಾರಾಗಣಿ | 3ಬಿ/ಸಾ.ಅ (ಇತರೆ) | 98.167 |
| 8. | 22752 | ಸೋಮಶೇಖರ್ | ಪ.ಜಾ (ಇತರೆ) | 98.167 |
| 9. | 26725 | ಆರ್.ಎನ್. ಬಸವರಾಜ | ಪ್ರವರ್ಗ–3ಬಿ/ಸಾ.ಅ. (ಗ್ರಾಮೀಣ) | 98.000 |
| 10. | 22731 | ಈರಪ್ಪ ಸಿದ್ದಪ್ಪ ಪೂಜಾರಿ | ಪ್ರವರ್ಗ–2ಎ/ಸಾ.ಅ. (ಗ್ರಾಮೀಣ) | 98.000 |
| 11. | 20829 | ಶರಣಪ್ಪ ನಿಂಗಪ್ಪ ಯಂಕಂಚಿ | ಪ್ರವರ್ಗ–2ಎ (ಇತರೆ) | 98.000 |
| 12. | 5476 | ಮನೋಹರ | ಪ್ರವರ್ಗ–2ಎ (ಗ್ರಾಮೀಣ) | 97.833 |
| 13. | 9558 | ಶಕೀಲ ಅಹೇಮದ | ಪ್ರವರ್ಗ–2ಬಿ (ಇತರೆ) | 97.833 |
| 14. | 24375 | ಲಕ್ಷ್ಮೀಬಾಯಿ ಈರಪ್ಪ ಕಲ್ಯಾಣಿ | ಸಾ.ಅ. (ಮಹಿಳೆ) | 97.667 |
| 15. | 25695 | ಸುಮಿತ್ರ ಬಸನಗೌಡ ಪಾಟೀಲ | ಸಾ.ಅ. (ಮಹಿಳೆ) | 97.667 |
| 16. | 19704 | ಬಿ. ಭಾಗ್ಯಮ್ಮ | ಪ.ಪಂ/ಸಾ.ಅ. (ಮಹಿಳೆ) | 97.500 |
| 17. | 23928 | ಕಾಂತು ರಾಠೋಡ | ಪ.ಜಾ. (ಗ್ರಾಮೀಣ) | 97.500 |
| 18. | 14378 | ಸಂಜೀವ ವಾಲಿ | ಪ್ರವರ್ಗ–3ಬಿ/ಸಾ.ಅ. (ಕ.ಮಾ) | 97.333 |
| 19. | 5366 | ರಾಮಸಿಂಗ್ | ಪ.ಜಾ (ಗ್ರಾಮೀಣ) | 97.333 |
| 20. | 23818 | ಅನಿತಾ ಬಂಡಾರಕರ | ಸಾ.ಅ. (ಮಹಿಳೆ) | 97.222 |
| 21. | 24355 | ಶಾರದಬಾಯಿ ಭೀಮನಗೌಡ ಕುಳಗೇರಿ | ಸಾ.ಅ. (ಮಹಿಳೆ) | 97.167 |
| 22. | 14960 | ರಾಜು ರಾಮದಾಸ ರಾಠೋಡ | ಪ.ಜಾ/ಸಾ.ಅ. (ಗ್ರಾಮೀಣ) | 97.167 |
| 23. | 19676 | ವಿನಾಯಕ ಚಂದ್ರಶೇಖರಯ್ಯ ದೇಸಾಯಿಮಠ | ಪ್ರವರ್ಗ–3ಬಿ/ಸಾ.ಅ. (ಗ್ರಾಮೀಣ) | 97.000 |
| 24. | 27498 | ಗುರುಲಿಂಗಯ್ಯ ಕ್ಷೇರಾನಂದ ಸ್ವಾಮಿ | ಪ್ರವರ್ಗ–3ಬಿ/ಸಾ.ಅ. (ಗ್ರಾಮೀಣ) | 96.833 |
| 25. | 25876 | ಶಿವಮ್ಮ ಹಣಮಂತಪ್ಪ ಹಾದಿಮನಿ | ಪ.ಜಾ/ಸಾ.ಅ. (ಮಹಿಳೆ) | 96.667 |
| 26. | 24435 | ಭಾಗ್ಯಶ್ರೀ ಸಿದ್ದಣ್ಣ ಹೇರೂರ | ಪ್ರವರ್ಗ–1 (ಮಹಿಳೆ) | 96.444 |
| 27. | 17320 | ಎಂ. ಚನ್ನಕೃಷ್ಣಪ್ಪ | ಪ್ರವರ್ಗ–3ಎ (ಇತರೆ) | 96.333 |
| 28. | 24357 | ಸಂತೋಷ ಬಸಪ್ಪ ಹತ್ತರಕಿಹಾಳ | ಪ್ರವರ್ಗ–3ಬಿ (ಇತರೆ) | 96.111 |

| ಕ್ರಮ ಸಂಖ್ಯೆ | ಅರ್ಜಿ ಸಂಖ್ಯೆ | ಅಭ್ಯರ್ಥಿಯ ಹೆಸರು (ಶಾಲಾ ವರ್ಗಾವಣೆ ಪ್ರಮಾಣ ಪತ್ರದಲ್ಲಿದ್ದಂತೆ) | ಅಭ್ಯರ್ಥಿಯ/ಆಯ್ಕೆಯಾದ ಮೀಸಲಾತಿ | ಶ್ರೇಯಾಂಕ |
|---|---|---|---|---|
| 29. | 3842 | ಕವಿತ ಮೇಗು ರಾಠೋಡ | ಪ.ಜಾ. (ಮಹಿಳೆ) | 96.000 |
| 30. | 18477 | ಎಂ.ಹೆಚ್. ವೆಂಕಟೇಶ್ | ಪ.ಜಾ (ಗ್ರಾಮೀಣ) | 96.000 |
| 31. | 17310 | ಅಶೋಕ ಹನುಮಂತಪ್ಪ ಒಡ್ಡೊಡಗಿ | ಪ್ರವರ್ಗ–2ಎ (ಗ್ರಾಮೀಣ) | 96.000 |
| 32. | 19625 | ಡಿ.ವಿ. ಸುಬ್ರಮಣ್ಯ | ಪ್ರವರ್ಗ–1 (ಗ್ರಾಮೀಣ) | 95.818 |
| 33. | 26343 | ನಿರುಪಮ ಎಂ.ಆರ್. | ಪ.ಜಾ (ಮಹಿಳೆ) | 95.667 |
| 34. | 25337 | ಜಿ. ಪ್ರಮೀಳ | ಪ್ರವರ್ಗ–3ಎ (ಮಹಿಳೆ) | 95.091 |
| 35. | 11810 | ಎಂ.ಸಿ. ವಾಣಿಬಾಯಿ | ಸಾ.ಅ. (ಮಹಿಳೆ) | 95.000 |
| 36. | 10670 | ಶಿವಪ್ಪ ಮಹದೇವಪ್ಪ ಗಡ್ಡಿ | ಪ್ರವರ್ಗ–2ಎ (ಗ್ರಾಮೀಣ) | 95.000 |
| 37. | 18123 | ಫರ್ಜಾನಾ | ಪ್ರವರ್ಗ–2ಬಿ/ಸಾ.ಅ. (ಮಹಿಳೆ) | 94.833 |
| 38. | 5450 | ಸಿದ್ದಮ್ಮ ವೀರಬಸಪ್ಪ ಶಿರೋಳ | ಪ್ರವರ್ಗ–2ಎ (ಮಹಿಳೆ) | 94.333 |
| 39. | 18144 | ಮಂಜುಳಾ ಚ. ಹುಲಿಕಂತಿಮಠ | ಪ್ರವರ್ಗ–3ಬಿ (ಮಹಿಳೆ) | 94.167 |
| 40. | 22744 | ಸುನೀತಾ ರಾಮಸಿಂಗ್ ರಾಠೋಡ | ಪ.ಜಾ (ಮಹಿಳೆ) | 94.000 |
| 41. | 12452 | ಹಣಮಪ್ಪ ರಾಮಪ್ಪ ಸೂಳಿಕಲ್ | ಪ್ರವರ್ಗ–2ಎ/ಸಾ.ಅ. (ಯೋ.ಅ) | 93.833 |
| 42. | 10405 | ಹಂಸಲೇಖ | ಪ್ರವರ್ಗ–2ಎ (ಮಹಿಳೆ) | 93.500 |
| 43. | 4988 | ಮೇಧಾ ಮಂಜುನಾಥ ನಾಯ್ಕ | ಪ್ರವರ್ಗ–2ಎ (ಮಹಿಳೆ) | 93.222 |
| 44. | 9297 | ಪಾರ್ವತಿ ಹಣಮಂತ್ರಾಯ ನಾಯ್ಕೋಡಿ | ಪ.ಪಂ (ಮಹಿಳೆ) | 91.833 |
| 45. | 19372 | ಶಾಯನ್‌ಪರಿ ಮೋದಿನಸಾಬ ಮುಲ್ಲಾ | ಪ್ರವರ್ಗ–2ಬಿ (ಮಹಿಳೆ) | 90.833 |
| 46. | 13408 | ಎಂ.ಆರ್. ಧನಂಜಯ | ಸಾ.ಅ (ಅಂ.ವಿ.–ದೃಷ್ಟಿ ಮಾಂದ್ಯತೆ) | 82.833 |
| 47. | 20468 | ವಿ.ಎನ್. ಪುನೀತ್ ವಿಜಯಕುಮಾರ್ | ಸಾ.ಅ. (ಅಂ.ವಿ. ದೃಷ್ಟಿ ಮಾಂದ್ಯತೆ) | 81.333 |
| 48. | 19467 | ಶಿವಕುಮಾರ ವಸಂತ ಮಲ್ಲಯ್ಯಗೋಳ | ಪ.ಜಾ (ಅಂ.ವಿ. ದೃಷ್ಟಿ ಮಾಂದ್ಯತೆ) | 72.833 |
| 49. | 7511 | ಶಿವರಾಜ | ಪ್ರವರ್ಗ–2ಎ (ಅಂ.ವಿ– ದೃಷ್ಟಿ ಮಾಂದ್ಯತೆ) | 70.500 |
| 50. | 4237 | ರಾಮಕೃಷ್ಣ ಎಂ. | ಪ್ರವರ್ಗ–2ಎ/ಸಾ.ಅ (ಮಾ.ಸೈ) | 68.667 |
| 51. | 16853 | ಕೇಶವ ಪೂಜಾರಿ ಎಂ. | ಸಾ.ಅ. (ಮಾ.ಸೈ) | 65.667 |

(ಕ.ಮಾ–ಕನ್ನಡ ಮಾಧ್ಯಮ, ಯೋ.ಅ–ಯೋಜನಾ ನಿರಾಶ್ರಿತ, ಮಾ.ಸೈ–ಮಾಜಿ ಸೈನಿಕ, ಅಂ.ವಿ–ಅಂಗವಿಕಲ)

**ಪಿ.ಆರ್. 144**

**ನಿಬಂಧಕರು,**
ಕರ್ನಾಟಕ ಲೋಕಾಯುಕ್ತ, ಬೆಂಗಳೂರು